ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 60

# ನಾಮಧಾರಣೆ

## ಆಚಾರ-ವಿಚಾರ




ಸಂಗ್ರಹ - ಅನುವಾದ :
ಪಂ. ವಾದಿರಾಜಾಚಾರ್ಯ ಕರಣಮ್

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ,
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

# Namadharane

A Work on Gopicandana & Mudra Dharane.

Compiled by : **Pt. Vadirajacharya Karanam**

Published by : Vishva Madhwa Maha Parishat

Copies : 2000

First Edition : February 2009

No.of Pages : 96



Price. [In India] **Rs. 25**

Copies can be had from :

Vishva Madhwa Maha Parishat
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

Type Setting : V.M.M.P Research wing.

Cover Design : K.M.Sheshagiri

Printed by :

**VAGARTHA,** 149. 8th Cross. N.R.Colony. Bangalore-4 Ph.2242 7677



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ.

ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ
ಅವರ ದ್ವಾದಶವಾರ್ಷಿಕಪೀಠಾರೋಹಣಮಹೋತ್ಸವ ಸಂದರ್ಭದಲ್ಲಿ
ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ
ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

## ಅನುಗ್ರಹ ಸಂದೇಶ

ನಾಮಧಾರಣೆ ಎಲ್ಲ ಸತ್ಕರ್ಮಗಳಿಗೆ ಅನಿವಾರ್ಯವಾದ ಅಂಗ.

ಊರ್ಧ್ವಪುಂಡ್ರವಿಹೀನಸ್ತು ಕರ್ಮ ಯತ್ಕಿಂಚಿದಾಚರೇತ್ ।
ತತ್ಸರ್ವಂ ನಿಷ್ಫಲಂ ಯಾತಿ ಇಷ್ಟಾಪೂರ್ತಾ ಅಪಿ ದ್ವಿಜಾಃ ॥

ಎಂದು ಆದೇಶಿಸಿದಂತೆ ನಾಮ ಧರಿಸದೇ ಮಾಡಿದ ಸಣ್ಣ-ದೊಡ್ಡ ಎಲ್ಲ ಪುಣ್ಯಕರ್ಮಗಳೂ ವ್ಯರ್ಥ. ನಾಮಧಾರಣೆ ಕೇವಲ ಧಾರ್ಮಿಕವಾದ ಒಂದು ಪ್ರಕ್ರಿಯೆಯಲ್ಲ. ಇದರ ಹಿನ್ನೆಲೆಯಲ್ಲಿ ಹಿರಿದಾದ ಅನುಸಂಧಾನವಿದೆ. ನಾಮ-ಮುದ್ರಗಳು ಭಗವಂತನ ಚಿಹ್ನೆಗಳು. ಅವುಗಳನ್ನು ನಾವು ಧರಿಸುವುದೆಂದರೆ ''ನೀನು ನನ್ನ ಈಶ. ನಾನು ನಿನ್ನ ದಾಸ. ಈ ದೇಹ ನಿನ್ನ ಅಧೀನ. ನನ್ನದೆಲ್ಲವೂ ನಿನ್ನದೇ'' ಎಂದು ಆ ಭಗವಂತನಿಗೆ ನಮ್ಮನ್ನೇ ನಾವು ಸಮರ್ಪಿಸಿಕೊಂಡಂತೆ. ಆ ದೇವನ ದಾಸ್ಯವನ್ನು ಹೆಮ್ಮೆಯಿಂದ ಸಾರಿಕೊಂಡಂತೆ. ಆದ್ದರಿಂದ ಲಜ್ಜೆ ಬಿಟ್ಟು ಸ್ಪಷ್ಟವಾಗಿ ಕಾಣುವಂತೆ ಭಗವಂತನ ಚಿಹ್ನಗಳಾದ ಗೋಪೀಚಂದನ-ಮುದ್ರೆಗಳನ್ನು, ಅಂಗಾರ-ಅಕ್ಷತೆಗಳನ್ನು ಪ್ರತಿಯೊಬ್ಬನೂ ಧರಿಸಲೇಬೇಕು

ಇಂತಹ ನಾಮಧಾರಣೆಯ ವಿಷಯದಲ್ಲಿ ತಿಳಿಯಬೇಕಾದದ್ದು ಬಹಳ. ಅದರ ಮಹತ್ತ್ವ, ಧಾರಣೆಯ ಕ್ರಮ, ವೈವಿಧ್ಯಗಳು ಹೀಗೆ ಸಾಕಷ್ಟಿವೆ. ಶಾಸ್ತ್ರಗಳಲ್ಲಿ ವಿಸ್ತಾರವಾಗಿ ತಿಳಿಸಿಕೊಟ್ಟ ಆ ವಿಷಯಗಳನ್ನು ನಮ್ಮ ಪ್ರಿಯಶಿಷ್ಯನಾದ ಪಂ.ವಾದಿರಾಜಾಚಾರ್ಯ ಕರಣಂ ಇವನು ಬಹಳ ಸುಂದರವಾಗಿ ಈ ಕೃತಿಯಲ್ಲಿ ಸಂಗ್ರಹಮಾಡಿದ್ದಾನೆ. ಅನೇಕ ಪುರಾಣ-ಸ್ಮೃತಿಗಳನ್ನು ವಿಶೇಷವಾಗಿ ಅಧ್ಯಯನಮಾಡಿ ಸರಳವಾದ ಭಾಷೆಯಲ್ಲಿ ಈ ಕೃತಿಯನ್ನು ಸಿದ್ಧಪಡಿಸಿದ್ದಾನೆ. ಅಧ್ಯಯನಶೀಲನಾದ ವಾದಿರಾಜಾಚಾರ್ಯನು ಈಗಾಗಲೇ ಈ ತರಹದ ಅನೇಕ

ಕನ್ನಡ ಕೃತಿಗಳನ್ನು ರಚಿಸಿದ್ದಲ್ಲದೇ ಅನೇಕವ್ಯಾಖ್ಯಾನಗಳಿಂದ ಕೂಡಿದ ಉಪನಿಷದ್ಭಾಷ್ಯ ಮೊದಲಾದ ಉದ್ಗ್ರಂಥಗಳನ್ನು ಸಂಶೋಧಿಸಿ ಸಂಪಾದನೆ ಮಾಡುವ ಮೂಲಕ ಶ್ರೀಮದಾಚಾರ್ಯರ-ಶ್ರೀವೇದವ್ಯಾಸದೇವರ ಸೇವೆಯನ್ನು ಮಾಡಿದ್ದಾನೆ. ಭಗವಂತ ಇವನಿಂದ ಇತೋऽಪ್ಯತಿಶಯವಾಗಿ ಗ್ರಂಥಲೇಖನ-ಸಂಪಾದನ ಮೊದಲಾದ ಕಾರ್ಯವನ್ನು ಮಾಡಿಸಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮೂಲರಾಮ-ದಿಗ್ವಿಜಯರಾಮ-ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.



ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

## ಆಶೀರ್ವಚನ

**ಮಾಧ್ವಯುವಪರಿಷತ್**ಸಂಸ್ಥೆಯು ಈಗಾಗಲೆ ಅನೇಕ ಧಾರ್ಮಿಕ ಕಾರ್ಯಗಳ ಮುಖಾಂತರ ಎಲ್ಲರಿಗೂ ಪರಿಚಿತವಾಗಿದೆ. ಈ ಸಂಸ್ಥೆಯು ಈ ಗ್ರಂಥಪ್ರಕಾಶನದ ಸಂಪೂರ್ಣ ವೆಚ್ಚವನ್ನು ಭರಿಸಿದೆ. ಈ ಸಂಸ್ಥೆಯ ಸದಸ್ಯರೆಲ್ಲ ಈ ಮೂಲಕ ಗುರುಗಳ ವೇದವ್ಯಾಸದೇವರ ಉತ್ತಮ ಸೇವೆಯನ್ನು ಮಾಡಿದ್ದಾರೆ.

ಈ ಎಲ್ಲ ಸದಸ್ಯರಿಗೆ ಭಗವಂತ ಆಯುರಾರೋಗ್ಯ ಐಶ್ವರ್ಯಗಳನ್ನು ಆಚಾರ್ಯರ ಶಾಸ್ತ್ರದಲ್ಲಿ ಆಸಕ್ತಿಯನ್ನು ನೀಡಲಿ ಎಂದು ಅಸ್ಮದುಪಾಸ್ಯ-ಮೂರ್ತಿ ಶ್ರೀಮೂಲರಾಮದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು
ಉತ್ತರಾದಿಮಠ

# ಮುನ್ನುಡಿ

ನಾऽದೀಕ್ಷಿತಃ ಪ್ರಕುರ್ವೀತ ವಿಷ್ಣೋರಾರಾಧನಕ್ರಿಯಾಮ್ ॥

ಎಂದು ಆರ್ಯರು ತಿಳಿಸಿದಂತೆ ಸಾಧಕನಾಗಲು ಬಯಸುವವನು ದೀಕ್ಷಿತನಾಗಬೇಕು. ಆ ದೀಕ್ಷೆಗಳಲ್ಲಿ ಪ್ರಧಾನವಾದದ್ದು ನಾಮಧಾರಣೆ. ಕೇಶವಾದಿ ದ್ವಾದಶನಾಮಗಳಿಂದ ಶುಕ್ಲಪಕ್ಷದಲ್ಲಿ, ಸಂಕರ್ಷಣಾದಿ ದ್ವಾದಶನಾಮಗಳಿಂದ ಕೃಷ್ಣಪಕ್ಷದಲ್ಲಿ ದ್ವಾದಶ ಊರ್ಧ್ವಪುಂಡ್ರಗಳನ್ನು ಧರಿಸುವುದು ತಾರಕವಾಗುತ್ತದೆ.

ನಾಮಧಾರಣೆಯ ಮಹತ್ತ್ವವನ್ನು ತಿಳಿಸುವ ವಚನಗಳು ಪುರಾಣಗಳಲ್ಲಿ ಸ್ಮೃತಿಗಳಲ್ಲಿ ಹೇರಳವಾಗಿವೆ. ಆ ಎಲ್ಲ ವಚನಗಳನ್ನು ಅವಲೋಕನ ಮಾಡಿದಾಗ ವೈಷ್ಣವರಾದ ಎಲ್ಲರಿಗೂ ಇದು ಆವಶ್ಯಕವೆಂಬುದು ತಿಳಿದು ಬರುತ್ತದೆ. ಇದರಂತೆ ಮುದ್ರಾಧಾರಣೆಯು ಕೂಡಾ ಕರ್ಮಕ್ಕೆ ಅಂಗವಾಗಿದೆ. ನಾಮಧಾರಣೆಯ ಮತ್ತು ಮುದ್ರಾಧಾರಣೆಯ ವಿಷಯದಲ್ಲಿ ಅನೇಕ ಸಂಪ್ರದಾಯಗಳು ಮತ್ತು ಅನೇಕ ಪ್ರಮಾಣಗಳು ಇವೆ.

ಪುಂಡ್ರಧಾರಣೆಯ ವಿಷಯದಲ್ಲಿ, ವಿಶುದ್ಧವಾದ ಪ್ರಮಾಣಗಳಿಗೆ ಮತ್ತು ಸಂಪ್ರದಾಯಕ್ಕೆ ಅನುಗುಣವಾದ ಪದ್ಧತಿಯನ್ನು ಈ ಕಿರು ಹೊತ್ತಿಗೆಯಲ್ಲಿ ನೀಡಲಾಗಿದೆ.

ನಾಮಧಾರಣೆಯ ಈ ಹೊತ್ತಿಗೆಯಲ್ಲಿ ಮುದ್ರಾಧಾರಣೆಯ ವಿಚಾರವನ್ನು ಸಂಕ್ಷೇಪವಾಗಿ ಮಾಡಲಾಗಿದೆ.

ಮುದ್ರಾಧಾರಣೆಯ ವಿಷಯದಲ್ಲಿ ಶ್ರೀನಿವಾಸತೀರ್ಥರು ತಿಳಿಸಿದ ಪ್ರಮಾಣಪೂರ್ವಕವಾದ ಪದ್ಧತಿಯನ್ನು ನೀಡಲಾಗಿದೆ.

ಪ್ರಕೃತ ಈ ಹೊತ್ತಿಗೆಯ ಅನುವಾದಕ್ಕೆ ಪ್ರೇರಕಶಕ್ತಿಯಾಗಿದ್ದವರು ನನ್ನ ಗುರುಗಳು (ಶ್ರೀ1008ಶ್ರೀಸತ್ಯಾತ್ಮತೀರ್ಥಶ್ರೀಪಾದರು) ಸದಾ ಶ್ರೀಮನ್ನ್ಯಾಯ-ಸುಧಾದಿಪಾಠಪ್ರವಚನ, ಮಧ್ವಮತಸಿದ್ಧಾಂತದ ಪ್ರಚಾರ ಮೊದಲಾದ ಶ್ರೀಹರಿಪೂಜಾರೂಪವಾದ ಕಾರ್ಯಗಳಲ್ಲಿ ನಿರತರಾದವರು ಇವರು. ಸಾಧಕರಿಗೆ ಇವರು ಮಾಡುತ್ತಿರುವ ಉಪಕಾರ ಚಿರಸ್ಮರಣೀಯ. ಬಿಡುವು ಇವರ

ದಿನಚರಿಯಲ್ಲಿಯೇ ಇಲ್ಲ. ಇದು ಅವರನ್ನು ಕಂಡವರಿಗೆಲ್ಲ ಗೊತ್ತು. ಆದರೂ ನನ್ನ ಈ ಪ್ರಯತ್ನಕ್ಕೆ ಆಶೀರ್ವಚನವನ್ನು ನೀಡಿರುವ ನನ್ನ ವಿದ್ಯಾಗುರುಗಳ (ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು) ಚರಣಸನ್ನಿಧಿಗೆ ಮತ್ತೆ ಮತ್ತೆ ಅನಂತಾನಂತ ಶಿರಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಬಿಡುವಿಲ್ಲದೇ ಪಾಠಪ್ರವಚನದಲ್ಲಿ, ಶ್ರೀಮದ್ಭಾಗವತಾದಿಗ್ರಂಥಗಳ ರಚನೆಯಲ್ಲಿ ತಲ್ಲೀನರಾದರೂ ತಮ್ಮ ಅಮೂಲ್ಯ ಸಲಹೆಗಳಿಂದ ನಮ್ಮ ಏಳಿಗೆಗೆ ಕಾರಣರಾದ ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪಂ.ಪೂ. ಆಚಾರ್ಯರವರಿಗೆ (ಶ್ರೀ ರಂಗಾಚಾರ್ಯ ಗುತ್ತಲ) ಸಾಷ್ಟಾಂಗ ಪ್ರಣಾಮಗಳು.

ಬೇಸರವಿಲ್ಲದೇ ನಮ್ಮ ಅಭಿವೃದ್ಧಿಗೆ ಪದೇ ಪದೇ ಎಚ್ಚರ ನೀಡುತ್ತಿರುವ, ಗುರುಗಳಾದ ಶ್ರೀಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ.ಪೂ ಆಚಾರ್ಯರಿಗೆ (ಶ್ರೀ ವಿದ್ಯಾಸಿಂಹಾಚಾರ್ಯ ಮಾಹುಲಿ) ಸಾಷ್ಟಾಂಗ ಪ್ರಣಾಮಗಳು.

ಸಂಶೋಧನೆಯ ಸಮಯದಲ್ಲಿ ಅಮೂಲ್ಯವಾದ, ಸೂಕ್ತವಾದ, ಸಲಹೆಗಳನ್ನು ನೀಡುತ್ತಿರುವ ಪಂ. ವಿದ್ಯಾಧೀಶಾಚಾರ್ಯ ಗುತ್ತಲ ಇವರಿಗೆ ನನ್ನ ನಮಸ್ಕಾರಗಳು.

ಈ ಗ್ರಂಥವು ಅಚ್ಚುಕಟ್ಟಾಗುವಂತೆ ಜೋಡಣೆ ಮಾಡಿದ ಪಂ. ಮಹಿದಾಸಾಚಾರ್ಯ ಜೋಷಿ ಇವರಿಗೆ, ಸುಂದರವಾಗಿ ಮುಖಪುಟವಿನ್ಯಾಸ ಮಾಡಿದ ಕೆ. ಎಮ್. ಶೇಷಗಿರಿ ಇವರಿಗೆ ಆದರಪೂರ್ವಕ ಕೃತಜ್ಞತೆಗಳು. ಮತ್ತು ಸಕಾಲಕ್ಕೆ ಓರಣವಾಗಿ ಮುದ್ರಿಸಿದ ವಾಗರ್ಥ ಮುದ್ರಣಾಲಯದವರಿಗೆ ಕೃತಜ್ಞತೆಗಳು.

ಇದರಲ್ಲಿರುವ ನನ್ನ ತಪ್ಪುಗಳನ್ನು ಸಹಿಸಿ ಹರಿಸಬೇಕೆಂದು ಸುಜನರಲ್ಲಿ ಸವಿನಯವಾಗಿ ಪ್ರಾರ್ಥಿಸುತ್ತೇನೆ.

ಸುಧೀಪಾದದಾಸ

ವಾದಿರಾಜ ಕರಣಮ್

# ಪ್ರಕಾಶಕರ ನುಡಿ

ಶ್ರೀ1008ಶ್ರೀಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ **''ವಿಶ್ವಮಧ್ವಮಹಾಪರಿಷತ್''**

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ತ್ವದ ಗ್ರಂಥಗಳನ್ನು ಅನೇಕ ಟೀಕಾ-ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ 2008-09ನೇ ವರ್ಷವನ್ನು ಪರಮಪೂಜ್ಯ ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ ದ್ವಾದಶವಾರ್ಷಿಕಪೀಠಾರೋಹಣ ವರ್ಷವನ್ನಾಗಿ ಆಚರಿಸಲಾಗುತ್ತಿದೆ. ತನ್ನಿಮಿತ್ತ ನಮ್ಮ ಸಂಸ್ಥೆಯು ಈ ವರ್ಷದಲ್ಲಿ ಪ್ರಕಾಶಿಸುವ ಎಲ್ಲ ಪುಸ್ತಕಗಳನ್ನು ಈ ಸಮಾರಂಭದ ಸ್ಮಾರಕವಾಗಿ ಗುರುಗಳಿಗೆ ಸಮರ್ಪಿಸುತ್ತಿದೆ. ಆ ಗ್ರಂಥಮಾಲೆಯ ಅಂಗವಾಗಿ ಪಂ. ವಾದಿರಾಜಾಚಾರ್ಯ ಕರಣಂ ಇವರು ಜನೋಪಯೋಗಿಯಾದ ''ನಾಮಧಾರಣೆ'' ಎಂಬ ಕೃತಿಯನ್ನು ಸುಂದರವಾಗಿ ಸಂಪಾದನೆ ಮಾಡಿದ್ದಾರೆ. ಇವರಿಗೂ ಹಾಗೂ ಸುಂದರವಾಗಿ ಮುದ್ರಣ ಮಾಡಿದ ವಾಗರ್ಥ ಮುದ್ರಣಾಲಯದವರಿಗೂ ಧನ್ಯವಾದಗಳು.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - 4

# ಸಂಕೇತಾಕ್ಷರಸೂಚೀ

ಅ.ಪು................. ಅಗ್ನಿಪುರಾಣ
ಆ.ಕೌ.ಪ.ಸ್ಮೃ ....... ಆಹ್ನಿಕಕೌಸ್ತುಭ-ಪರಾಶರಸ್ಮೃತಿ
ಆತ್ರೇ.ಸ್ಮೃ .......... ಆತ್ರೇಯಸ್ಮೃತಿ
ಕೃ.ಮ................ ಕೃಷ್ಣಾಮೃತಮಹಾರ್ಣವ
ಗ.ಪು.ಬ್ರ.ಕಾಂ ...... ಗರುಡಪುರಾಣಬ್ರಹ್ಮಕಾಂಡ
ತಾ.ಕೃ.ವ್ಯಾ .......... ತಾಮ್ರಪರ್ಣೀಕೃಷ್ಣಾಮೃತಮಹಾರ್ಣವವ್ಯಾಖ್ಯಾನ
ದಿ.ಮೀ .............. ದಿನತ್ರಯಮೀಮಾಂಸಾ
ನಾ.ಪು .............. ನಾರದಪುರಾಣ
ಪ.ಪು................. ಪದ್ಮಪುರಾಣ
ಪ್ರ.ಪಾ................ ಪ್ರಯೋಗಪಾರಿಜಾತ
ಬೃ.ಬ್ರ.ಸಂ ........... ಬೃಹತ್‌ಬ್ರಹ್ಮಸಂಹಿತಾ
ವ.ಸ್ಮೃ................ ವಸಿಷ್ಠಸ್ಮೃತಿ
ಬ್ರ.ಪು ................ ಬ್ರಹ್ಮಪುರಾಣ
ಭ.ಸಂ................ ಭರದ್ವಾಜಸಂಹಿತಾ
ಮ.ವಿ................. ಮಧ್ವವಿಜಯ
ಮೇ.ತಂ............. ಮೇರುತಂತ್ರ
ಯು.ಮ............ ಯುಕ್ತಿಮಲ್ಲಿಕಾ
ಯು.ಮ.ವ್ಯಾ ...... ಯುಕ್ತಿಮಲ್ಲಿಕಾವ್ಯಾಖ್ಯಾನ
ರಾ.ಮ ............. ರಾಮಾಮೃತಮಹಾರ್ಣವ
ರಾ.ಮ.ಟೀ ......... ರಾಮಾಮೃತಮಹಾರ್ಣವಟೀಕಾ
ಲ.ಆ.ಸ್ಮೃ............ ಲಘು ಆಶ್ವಲಾಯನಸ್ಮೃತಿ
ವಾ.ಉ............... ವಾಸುದೇವ ಉಪನಿಷತ್
ವಾ.ಸ್ಮೃ ............. ವಾಧೂಲಸ್ಮೃತಿ
ವಿ.ರ ................ ವಿಷ್ಣುರಹಸ್ಯ
ವಿ.ಸ್ಮೃ .............. ವಿಷ್ಣುಸ್ಮೃತಿ
ವೀ.ಮಿ............... ವೀರಮಿತ್ರೋದಯ
ವೃ.ಹಾ.ಸ್ಮೃ .......... ವೃದ್ಧಹಾರೀತಸ್ಮೃತಿ
ಶಂ.ಸ್ಮೃ.............. ಶಂಖಸ್ಮೃತಿ
ಶಾಂ.ಸ್ಮೃ ............ ಶಾಂಡಿಲ್ಯಸ್ಮೃತಿ
ಸ.ದ.................. ಸದಾಚಾರದರ್ಪಣ
ಸ.ಪ.................. ಸನ್ನ್ಯಾಸಪದ್ಧತಿ
ಸು.ಮೀ.ವಿ. ........ ಸುದರ್ಶನಮೀಮಾಂಸಾವಿವೇಕ
ಸ್ಕ.ಪು................. ಸ್ಕಂದಪುರಾಣ
ಸ್ಮೃ.ಕೃ.ವ್ಯಾ ......... ಸ್ಮೃತಿಮುಕ್ತಾವಲೀಕೃಷ್ಣಾಚಾರ್ಯರ ಕೃಷ್ಣಾಮೃತಮಹಾರ್ಣವವ್ಯಾಖ್ಯಾನ
ಸ್ಮೃ.ಮಾ.ಸಂ ....... ಸ್ಮೃತಿಮಾಣಿಕ್ಯಸಂಗ್ರಹ
ಹಾ.ಸ್ಮೃ ............. ಹಾರೀತಸ್ಮೃತಿ

# ವಿಷಯಾನುಕ್ರಮಣಿಕಾ


ಮುನ್ನುಡಿ 6
ಪ್ರಕಾಶಕರ ನುಡಿ 8
ಸಂಕೇತಾಕ್ಷರಸೂಚೀ 9
1. ಪುಂಡ್ರವನ್ನು ಧರಿಸದಿದ್ದರೇ 14
2. ಪುಂಡ್ರಧಾರಣೆ ಅಂದರೆ ? 15
3. ಆಂತರದೀಕ್ಷೆ 18
4. ವಿಷ್ಣುದೀಕ್ಷೆಗೆ ಜಾತಿಯ, ಲಿಂಗದ ಭೇದವಿಲ್ಲ 19
5. ವಿಷ್ಣುದೀಕ್ಷೆಯನ್ನು ಪಡೆಯದವ ಅಸತ್ಪಾತ್ರ 19
6. ವಿಷ್ಣುದೀಕ್ಷಾವಿಶಿಷ್ಟನಾದವನು ಸತ್ಪಾತ್ರ 20
7. ವಿಷ್ಣುದೀಕ್ಷೆಯಿಂದಲೆ ಸೌಭಾಗ್ಯ 20
8. ಪುಂಡ್ರಧಾರಣೆ ಒಂದು ಸಂಸ್ಕಾರ 21
9. ಪುಂಡ್ರಧಾರಣೆ ನವವಿಧಭಕ್ತಿಗಳಲ್ಲಿ ಒಂದು 21
10. ವೈಷ್ಣವತ್ವದ್ಯೋತಕ 23
11. ವೈಷ್ಣದೀಕ್ಷೆಯಿಂದ ಯುಕ್ತನಾದವನೇ ಸತ್ಪಾತ್ರ 23
12. ಪುಂಡ್ರವನ್ನು ಧರಿಸುವದು ಹೇಗೆ ? 23
13. ತಿರ್ಯಕ್ ಪುಂಡ್ರವೋ ? ಊರ್ಧ್ವಪುಂಡ್ರವೋ ? 24
14. ಊರ್ಧ್ವಪುಂಡ್ರ ಧಾರಣೆ ಉತ್ತಮ ಯಾಕೆ ? 24
15. ಗೋಪೀಚಂದನದಿಂದ ಪುಂಡ್ರಧಾರಣೆ 26
16. ಗೋಪೀಚಂದನ ಎಂಬ ನಾಮವೇತಕೆ ? 27
17 ಊರ್ಧ್ವಪುಂಡ್ರಕ್ಕಾಗಿ ವಿಹಿತವಾದ ಮೃತ್ತಿಕೆಗಳು 28
18. ತುಲಸೀಮೃತ್ತಿಕೆಯ ಪ್ರಾಶಸ್ತ್ಯ 30
19. ಯಾವ ವರ್ಣದ ಮೃತ್ತಿಕೆ ಯೋಗ್ಯ 31
20. ಚತುರ್ವಿಧವಾದ ಪುಂಡ್ರಧಾರಣೆ 32
21. ಯಾವ ಕಾಲದಲ್ಲಿ ಯಾವ ದ್ರವ್ಯದಿಂದ ? 32
22. ಅಕ್ಷತೆಯ ಧಾರಣೆಗೆ ಉಲ್ಲೇಖ 33
23. ಭಸ್ಮಧಾರಣೆ ವಿಹಿತವೋ ? 35
24. ಪಂಚಪುಂಡ್ರ-ತ್ರಿಪುಂಡ್ರಧಾರಣೆ 37
25. ಗಂಧಧಾರಣೆಯಲ್ಲಿ ವಿಶೇಷ 38
26. ಯಾವ ಬೆರಳಿನಿಂದ ಧರಿಸಬೇಕು 40
27. ಕನ್ನಡಿಯನ್ನು ನೋಡಿ ಧರಿಸಬೇಕು 41

28. ಹಣೆಯ ಮೇಲೆ ಧರಿಸುವುದು ಹೇಗೆ ? 41
29. ದಂಡಾಕಾರ ಪುಂಡ್ರ 42
30. ಎಲ್ಲ ಕಡೆಗೂ ಛಿದ್ರಯುಕ್ತವಾದ ಪುಂಡ್ರವಲ್ಲ 42
31. ಇತರ ಸ್ಥಳದಲ್ಲಿ ಪುಂಡ್ರಧಾರಣೆಯ ಆಕಾರ 44
32. ಊರ್ಧ್ವಪುಂಡ್ರನಿಷೇಧ ವಾಸ್ತವವಲ್ಲ 44
33. ಪುಂಡ್ರ ಹೇಗಿರಬೇಕು 45
34. ಗತಭೀತನಿಗೆ ಭಾಮೆ ರಕ್ಷೆ ಇಕ್ಕುವಳಂತೆ 46
35. ಧಾರಣವಿಧಿ 47
36. ಸಂಕಲ್ಪ 48
37. ಶ್ರೀಹರಿಧ್ಯಾನ 48
38. ಗೋಪೀಚಂದನಪ್ರಾರ್ಥನ 48
39. ಧಾರಣವಿಧಿ 50
40. ಜಲಾಭಿಮಂತ್ರಣ 50
41. ಗೋಪೀಮರ್ದನ 50
42. ಕೈಯಲ್ಲಿ ತೇಯ್ದು ಹಚ್ಚಿಕೊಳ್ಳಬೇಕು 51
43. ಉಗುರಿನ ಸಂಪರ್ಕವಾಗಬಾರದು 52
44. ಪುಂಡ್ರ ಧರಿಸುವಾಗ ದ್ವಾದಶನಾಮಗಳ ಆವಶ್ಯಕತೆ 52
45. ಧಾರಣಕ್ರಮ-ನಾಮಚಿಂತನೆ 53
46. ಮೂರು ಹೊತ್ತೂ ಪುಂಡ್ರಧಾರಣೆ 54
47. ಜಾತಿಗೆ ಅನುಗುಣವಾಗಿ ಪುಂಡ್ರಗಳ ಸಂಖ್ಯೆ 55
48. ಜಾತಿ-ಲಿಂಗಗಳಿಗೆ ಅನುಗುಣವಾಗಿ ಪುಂಡ್ರವನ್ನು ಧರಿಸಬೇಕಾದ ಸ್ಥಾನಗಳು 55
49. ಮಂತ್ರವನ್ನು ಉಚ್ಚರಿಸುವ ಕ್ರಮ 56
50. ಧಾರಣಯೋಗ್ಯಕಾಲ 57
51. ಸ್ನಾನಮಾಡದಿರುವಾಗಲೂ ಧರಿಸಬಹುದು 57
52. ಊರ್ಧ್ವಪುಂಡ್ರಧಾರಣಮಹಿಮಾ 59
53. ಕರ್ಮಾಧಿಕಾರಕ್ಕಾಗಿ ಪುಂಡ್ರಧಾರಣೆ 59
54. ಸಜ್ಜನರ ಅನುಗ್ರಹವನ್ನು ಪಡೆಯಲು 60
55. ಸನ್ಯಾಸಪದ್ಧತಿಯಲ್ಲಿ ಪುಂಡ್ರಮಹಿಮಾ 60
56. ಅಂತಕಾಲದಲ್ಲಿಯೂ ಗೋಪೀಚಂದನ ಕಡ್ಡಾಯ 62
57. ಊರ್ಧ್ವಪುಂಡ್ರ ಧರಿಸಿದವಗೆ ಅನ್ನದಾನ 62
58. ಹೀನವಾದ ಕರ್ಮವೂ ಪೂರ್ಣವಾಗುತ್ತದೆ 63

59. ಯಾವಾಗಲೂ ಮನೆಯಲ್ಲಿ ಗೋಪೀಚಂದನವಿರಬೇಕು 64
60. ಗೋಪೀಚಂದನದಾನಮ್ 65
61. ಶೂದ್ರನೂ ದಾನ ಪಡೆಯಲು ಅರ್ಹ 65
62. ವಿಶಿಷ್ಟವಾದ ಫಲಜನಕ 66
63. ಮುದ್ರಾಧಾರಣಮ್ 66
64. ಗೋಪೀಚಂದನದಿಂದ ನಿತ್ಯವೂ ಮುದ್ರಾಧಾರಣೆ 67
65. ಚಕ್ರಾದಿಧಾರಣೆಯ ವಿಷಯದಲ್ಲಿ ಪ್ರಮಾಣ 68
66. ಯಾರು ಧರಿಸಬೇಕು 68
67. ಪುಂಡ್ರಗಳ ಮೇಲೆಯೇ ಮುದ್ರಾಧಾರಣ 69
68. ಮುದ್ರಾಧಾರಿ ಮಾಡುವ ದಾನ 70
69. ಮುದ್ರೆಗಳನ್ನು ಧರಿಸಿ ದೈವ-ಪಿತೃಕರ್ಮಗಳನ್ನು ಮಾಡಬೇಕು 70
70. ಮುದ್ರೆಗಳನ್ನು ಧರಿಸಿದವನು ಪೂಜ್ಯ 71
71. ಚಕ್ರಾಂಕಿತನಾದವನಿಗೆ ಕನ್ಯಾದಾನ 72
72. ಚಕ್ರಾದಿಮುದ್ರೆಗಳನ್ನು ಧರಿಸುವಾಗ ಪಠಿಸಬೇಕಾದ ಮಂತ್ರಗಳು 73
73. ಚಕ್ರಾದಿಗಳನ್ನು ಧರಿಸಬೇಕಾದ ಸ್ಥಾನಗಳು 75
74. ಮುದ್ರಾಂಕಿತನಾದವನ ನಿಂದೆ ಸಲ್ಲದು 78
75. ಶ್ರೀಹರಿಯ ಸಾನ್ನಿಧ್ಯ ಎಲ್ಲಿ? 80
76. ಅಂಗಾರಧಾರಣೆಯ ವಿಧಾನ 82
77. ಎಷ್ಟು ಕಡೆ ಧರಿಸಬೇಕು 83
78. ಪುಂಡ್ರಧಾರಣೆ ನಿತ್ಯ 84
79. ಪ್ರಾಣಪ್ರತಿಷ್ಠೆಯ ಆವಶ್ಯಕತೆ 84
80. ಮುದ್ರೆಗಳು ಯಾವ ಲೋಹದ್ದಾಗಿರಬೇಕು 84
81. ಸ್ತ್ರೀಯರ ನಾಮಧಾರಣೆ 85
82. ಪುಂಡ್ರಧಾರಣೆಗೆ ವಿಹಿತ ದ್ರವ್ಯ 89
83. ಸ್ತ್ರೀಯರಿಗೂ ಸಚ್ಛಿದ್ರಪುಂಡ್ರ 89
84. ನಾಮಮುದ್ರಾಧಾರಣವಿಧಿ 92

॥ ಶ್ರೀ ಗುರುಭ್ಯೋ ನಮಃ ॥ ಶ್ರೀ ಪರಮಗುರುಭ್ಯೋ ನಮಃ ॥
॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

# ನಾಮಧಾರಣೆ

(ಆಚಾರ-ವಿಚಾರ)

ಸಂಧ್ಯಾವಂದನ ಮೊದಲಾದ ಸಕಲಕರ್ಮಗಳಿಗೆ ಅಂಗವಾಗಿದೆ ಪುಂಡ್ರಧಾರಣ. ಪುಂಡ್ರವನ್ನು ಎಲ್ಲರೂ ಧರಿಸಬೇಕು. ಪುಂಡ್ರವನ್ನು ಧರಿಸದೆ ಮಾಡಿದ ಸಕಲಕರ್ಮಗಳು ವ್ಯರ್ಥ. ತಿಲಕವಿಲ್ಲದ ಮುಖ ಸ್ಮಶಾನಕ್ಕೆ ಸಮಾನ. ಆ ಮುಖ ಎಲ್ಲ ಅಮಂಗಳಗಳ ಆಮುಖ. ಹೀಗೆಂದು ಶೃತಿಸ್ಮೃತಿಗಳಲ್ಲಿ ಪುಂಡ್ರದ ಮಹಿಮೆಯನ್ನು ಪ್ರತಿಪಾದಿಸಿದ್ದಾರೆ. ಈ ಪುಂಡ್ರಧಾರಣೆ ಅಥವಾ ನಾಮಧಾರಣೆಯ ಬಗೆಗೆ ಯಥಾಶಕ್ತಿ ತಿಳಿಯಲು ಮನಸ್ಸನ್ನು ಮುಂದೆ ಮಾಡೋಣ.

ಪುಂಡ್ರಧಾರಣೆ ಎನ್ನುವದಕ್ಕಿಂತಲೂ ''ನಾಮಧಾರಣೆ'' ಎನ್ನುವದು ಹೆಚ್ಚು ಸೂಕ್ತವಾಗುತ್ತದೆ. ಪುಂಡ್ರಧಾರಣೆ ಎಂದರೆ ಚಿಹ್ನೆಯನ್ನು ಧರಿಸುವದು ಎಂದು ಮಾತ್ರ ಅರ್ಥವಾಗುತ್ತದೆ. ನಾಮಧಾರಣೆ ಎಂದರೆ ಹರಿಯ ಹನ್ನೆರಡು ನಾಮಗಳನ್ನು ಉಚ್ಚರಿಸುತ್ತಾ ವಿಹಿತವಾದ ಸ್ಥಳದಲ್ಲಿ ವಿಹಿತವಾದ ಮೃತ್ತಿಕೆಯಿಂದ ವಿಷ್ಣುಸ್ಮಾರಕವಾದ ಚಿಹ್ನೆಗಳನ್ನು ಧರಿಸುವುದು ಎಂದು ಅರ್ಥವಾಗುತ್ತದೆ. ವಿಷ್ಣುಚಿಂತನೆಗೆ ''ನಾಮಧಾರಣೆ'' ಎಂಬ ಹೆಸರು ಹೆಚ್ಚು ಸಹಕಾರಿಯಾಗುತ್ತದೆ. ಆದ್ದರಿಂದ ''ನಾಮಧಾರಣೆ'' ಎಂದು ವ್ಯವಹರಿಸುವುದು ಸಮಂಜಸವಾಗುತ್ತದೆ.

### ೧. ಪುಂಡ್ರವನ್ನು ಧರಿಸದಿದ್ದರೇ

ಪುಂಡ್ರವನ್ನು ಧರಿಸದಿರುವುದು ಒಂದು ಪಾಪ. ಆ ಪಾಪ ನಾವು ಮಾಡಿರುವ ಸಕಲಸತ್ಕರ್ಮಗಳನ್ನು ವ್ಯರ್ಥಗೊಳಿಸುತ್ತದೆ. ಈ ವಿಷಯವನ್ನು ಪರಾಶರಸ್ಮೃತಿಯ ವಚನದಿಂದ ಸ್ಮೃತಿಮುಕ್ತಾವಲೀಕಾರರಾದ ಶ್ರೀಕೃಷ್ಣಾಚಾರ್ಯರು ತಿಳಿಸುತ್ತಾರೆ. ಆ ವಚನ ಹೀಗಿದೆ.

> ಊರ್ಧ್ವಪುಂಡ್ರವಿಹೀನಂ ಯತ್ಸಂಧ್ಯಾಕರ್ಮಾದಿಕಂ ಚರೇತ್ ।
> ತತ್ಸರ್ವಂ ರಾಕ್ಷಸೈರ್ನೀತಂ ಜಪಹೋಮಾದಿಕಂ ತಥಾ ॥

ಊರ್ಧ್ವಪುಂಡ್ರವನ್ನು ಧರಿಸದೇ ಮಾಡಿರುವ ಜಪ-ಹೋಮಮೊದಲಾದ ಸತ್ಕರ್ಮಗಳ ಫಲವನ್ನು ರಾಕ್ಷಸರು ಅಪಹರಿಸುತ್ತಾರೆ. ಕರ್ಮದ ಸರಿಯಾದ ಫಲವು ದೊರೆಯಬೇಕಾದರೆ ಪುಂಡ್ರವನ್ನು ಅವಶ್ಯವಾಗಿ ಧರಿಸಬೇಕು. ಕೇವಲ ಜಪ-ಹೋಮಗಳು ಮಾಡುವಾಗ ಮಾತ್ರವಲ್ಲ, ಯಾವುದೇ ವಿಹಿತವಾದ ಕರ್ಮವನ್ನು ಮಾಡುವಾಗ ಊರ್ಧ್ವಪುಂಡ್ರವನ್ನು ಧರಿಸಲೇಬೇಕು. ಆದಿಪದ-ದಿಂದ ಈ ವಿಷಯವು ಇಲ್ಲಿ ಪ್ರಸ್ತುತವಾಗಿದೆ.

ಇಲ್ಲಿ ಆದಿಪದದಿಂದ ಹೇಳಿದ ವಿಷಯವನ್ನು ಸ್ಪಷ್ಟವಾಗಿ ತಿಳಿಸುವ ಪ್ರಮಾಣವಚನ ಈ ರೀತಿಯಾಗಿದೆ.

> ಊರ್ಧ್ವಪುಂಡ್ರವಿಹೀನಸ್ತು ಕರ್ಮ ಯತ್ಕಿಂಚಿದಾಚರೇತ್ ।
> ತತ್ಸರ್ವಂ ನಿಷ್ಫಲಂ ಯಾತಿ ಇಷ್ಟಾಪೂರ್ತಾ ಅಪಿ ದ್ವಿಜಾಃ ॥

ಯಾವುದೇ ಸಣ್ಣಕರ್ಮದಲ್ಲಿ ತೊಡಗಬೇಕಾದರೂ ಊರ್ಧ್ವಪುಂಡ್ರ-ಯುಕ್ತನಾಗಿರಬೇಕು. ಊರ್ಧ್ವಪುಂಡ್ರವಿಲ್ಲದೇ ಯಾವುದೇ ಸಣ್ಣಕರ್ಮವನ್ನು ಮಾಡಿದರೂ ಆ ಎಲ್ಲ ಕರ್ಮವೂ ವ್ಯರ್ಥವಾಗುತ್ತದೆ. ಯಜ್ಞಯಾಗಾದಿಗಳೂ ಮತ್ತು ತಟಾಕನಿರ್ಮಾಣರೂಪವಾದ ಅತಿ ದೊಡ್ಡದಾದ ಕರ್ಮಗಳೂ ಊರ್ಧ್ವಪುಂಡ್ರದಿಂದ ಅಂಕಿತನಾಗದೇ ಆಚರಿಸಿದರೆ ಅದು ಕೂಡಾ ವ್ಯರ್ಥವಾಗುತ್ತದೆ.

ವಿಷ್ಣುಸ್ಮೃತಿಯ ವಚನ ಕರ್ಮವೈಫಲ್ಯಗಳಿಗೆ ಕಾರಣಗಳೇನೆಂಬುದನ್ನು ಈ ರೀತಿಯಾಗಿ ತಿಳಿಸುತ್ತದೆ-

**ಉಪವೀತಂ ಶಿಖಾಬಂಧಮೂರ್ಧ್ವಪುಂಡ್ರಂ ವಿನಾ ಕೃತಮ್ ।**
**ಅಪವಿತ್ರಕೃತಂ ಕರ್ಮ ವಿಪ್ರಸ್ಯ ವಿಫಲಂ ಭವೇತ್ ॥**

ಕರ್ಮವನ್ನು ಮಾಡಬೇಕಾದರೆ ಯಜ್ಞೋಪವೀತವಿರಬೇಕು. ಶಿಖೆಯು ಬದ್ಧವಾಗಿರಬೇಕು. ಊರ್ಧ್ವಪುಂಡ್ರವಿರಬೇಕು. ಪವಿತ್ರವನ್ನು ಧರಿಸಿರಬೇಕು. ಇವುಗಳಿಲ್ಲದೇ ಮಾಡಿದ ಕರ್ಮವು ನಿಷ್ಫಲವಾಗುತ್ತದೆ.

**೨. ಪುಂಡ್ರಧಾರಣೆ ಅಂದರೆ ?**

ಸಾಧಾರಣವಾದ ಪ್ರಶ್ನೆಯಿದು. ಆದರೆ ಇದಕ್ಕೆ ಸಮಾಧಾನವೇನೆಂದು ಹಲವರಿಗೆ ಗೊತ್ತಿಲ್ಲ. ಮಣ್ಣನ್ನು ಮೈಗೆ ಮೆತ್ತಿಕೊಳ್ಳುವುದೆಂದು ನಾವೆಲ್ಲ ಭ್ರಮಿಸಿದ್ದೇವೆ. ಇದು ಪುಂಡ್ರಧಾರಣೆಯಲ್ಲ. ಇದರ ಅಪಾರವಾದ ಹಿರಿಮೆಯನ್ನು ವಿಷ್ಣುರಹಸ್ಯ ಅರುಹುತ್ತದೆ. ಪುಂಡ್ರಧಾರಣೆ ಇದೊಂದು ''ದೀಕ್ಷೆ'' ಎಂದು ವಿಷ್ಣುರಹಸ್ಯ ಬೋಧಿಸುತ್ತದೆ. ಆ ವಚನವಿದು.

**ನಾಮಚಿಹ್ನಾದಿನಾ ದೇಹೇ ವಹ್ನಿನಾ ವಾ ಮೃದಾಂಕನಮ್ ।**
**ಸಾ ಬಾಹ್ಯಾ ಪ್ರೋಚ್ಯತೇ ದೀಕ್ಷಾ ಹ್ಯಜ್ಞಾನಾಂ ಜ್ಞಾನಿನಾಮಪಿ ॥**

ಈ ಮಾತಿನಲ್ಲಿ ಮೂರು ವಿಧಿಗಳು ಅಡಕವಾಗಿವೆ. 1) ಹರಿಯ ನಾಮಗಳನ್ನು ಉಚ್ಚರಿಸುತ್ತಾ ಮೃತ್ತಿಕೆಯಿಂದ ಪುಂಡ್ರಗಳನ್ನು ಧರಿಸಬೇಕು. 2) ಹರಿಯ ಚಿಹ್ನೆಗಳಾದ ಶಂಖ-ಚಕ್ರ-ಗದಾ-ಪದ್ಮಗಳನ್ನು ಹಾಗು ಹರಿಯ ನಾಮವಿರುವ ನಾರಾಯಣಮುದ್ರೆಯನ್ನು ಮೃತ್ತಿಕೆಯಿಂದ ದೇಹದಲ್ಲಿ ಧರಿಸಬೇಕು. 3) ಹರಿಯ ಆಯುಧಗಳಾದ ಚಕ್ರ-ಶಂಖಗಳನ್ನು ಪ್ರಧಾನವಾದ ಪ್ರಸಂಗಗಳಲ್ಲಿ ಸುದರ್ಶನಹೋಮದ ಅಗ್ನಿಯಿಂದ ತಾಪಮಾಡಿ ತಮ್ಮ ಗುರುಗಳಾದ ಯತಿಗಳ ಮೂಲಕ ದೇಹದ ಮೇಲೆ ಹಾಕಿಸಿಕೊಳ್ಳಬೇಕು.

(ಈ ತಪ್ತಮುದ್ರೆಯನ್ನು ಸ್ವಯಂ ತಾನು ಧರಿಸಿಕೊಳ್ಳಬಾರದು. ಹಾಗು ಗೃಹಸ್ಥರಿಂದ ಈ ದೀಕ್ಷೆಯನ್ನು ಪಡೆಯಬಾರದು. ಈ ದೀಕ್ಷೆಯನ್ನು ಯತಿಗಳಾದ ತಮ್ಮ ಗುರುಗಳಿಂದಲೇ ಪಡೆಯಬೇಕು. ಈ ವಿಷಯವನ್ನು ಸ್ಪಷ್ಟಪಡಿಸುವ ವಚನಗಳು ಹೇರಳವಾಗಿವೆ.

ಪ್ರಸಂಗವಾದದ್ದರಿಂದ ಕೆಲವು ವಚನಗಳನ್ನು ಇಲ್ಲಿ ನಾವು ಗಮನಿಸೋಣ. ಸದಾಚಾರದರ್ಪಣವೆಂಬ ಅಪರೂಪದ ಧರ್ಮಶಾಸ್ತ್ರಗ್ರಂಥದಲ್ಲಿ ವರಾಹ-ಪುರಾಣದ ವಚನವೆಂಬುದಾಗಿ ಈ ಮಾತುಗಳನ್ನು ನೋಡಬಹುದು-

ಗುರುಂ ವಿನಾ ತು ಯೋ ದೀಕ್ಷಾಂ ಸ್ವಬುದ್ಧ್ಯಾ ಲಭತೇ ನರಃ ।
ನ ತತ್ ಸಿದ್ಧಿಮವಾಪ್ನೋತಿ ನರಕಂ ಚಾಭಿಪದ್ಯತೇ ॥

ಈಗಾಗಲೇ ತಪ್ತಮುದ್ರಾಧಾರಣೆ ಇದೊಂದು ದೀಕ್ಷೆ ಎಂದು ತಿಳಿದಿದ್ದೇವೆ. ಈ ದೀಕ್ಷೆಗಳು ಗುರುಮುಖವಾಗಿಯೇ ಆಗಬೇಕು. ಗುರುಗಳನ್ನು ಪರಿತ್ಯಜಿಸಿ ತನ್ನ ಬುದ್ಧಿಗೆ ತೋರಿದಂತೆ ದೀಕ್ಷೆಯನ್ನು ಸ್ವೀಕರಿಸಿದರೇ ಆ ದೀಕ್ಷೆಯಿಂದ ಮನುಷ್ಯ ಸಿದ್ಧಿಯನ್ನು ಪಡೆಯಲಾರ. ಇಷ್ಟೇ ಅಲ್ಲ. ಆ ರೀತಿಯಾದ ದೀಕ್ಷೆಯನ್ನು ಪಡೆದವರು ನರಕಭಾಜನರಾಗುತ್ತಾರೆ. ಆದ್ದರಿಂದ ಈ ವಿಷಯದಲ್ಲಿ ಜಾಗರೂಕರಾಗಿ ಇರಬೇಕು. ಈ ವಿಷಯದಲ್ಲಿ ಹೇತುವಾದಿಗಳಾಗಬಾರದು.

ಒಟ್ಟಾರೆ ದೀಕ್ಷೆಯ ವಿಷಯದಲ್ಲಿ ಮೇಲಿನ ವಚನ ಸಾಮಾನ್ಯವಾದ ಪ್ರಮಾಣವಾದರೆ ತಪ್ತಮುದ್ರಾಧಾರಣೆಗೆ ಸಂಬಂಧಪಟ್ಟಂತೆ ವರಾಹಪುರಾಣದಲ್ಲಿ ಈ ವಿಶೇಷವಾದ ವಚನವನ್ನು ಕಾಣುತ್ತೇವೆ-

ತಪ್ತಮುದ್ರಾಂ ತು ಯೋ ಮರ್ತ್ಯಃ ಸ್ವಬುದ್ಧ್ಯೈವ ಗುರುಂ ವಿನಾ ।
ತೇನಾಽಹಂ ತಾಪಿತೋ ದೇವಿ ನರಕೇ ವಸತೇ ಧ್ರುವಮ್ ॥ ಸ.ದ

ಹೇ ದೇವಿ ! ಗುರುಗಳನ್ನು ಪರಿತ್ಯಜಿಸಿ ತನ್ನ ಮತಿಗೆ ತೋರಿದಂತೆ ತಪ್ತಮುದ್ರಾಧಾರಣೆಯನ್ನು ಮಾಡಿಕೊಂಡರೆ ನನಗೆ ತಾಪವಾಗುತ್ತದೆ. ನನಗೆ ತಾಪವನ್ನುಂಟುಮಾಡುವ ಕರ್ಮವನ್ನು ಮಾಡಿದವನು ನರಕಕ್ಕೆ ಬೀಳುತ್ತಾನೆ. ಆದ್ದರಿಂದ ಸಾಧಕನಾದವನು ಈ ವಿಷಯದಲ್ಲಿ ಸರ್ವಥಾ ಜಾಗರೂಕನಾಗಿ ಇರಬೇಕು.

ಸತಾಂ ಭುಜೇ ಧಾರಯತಿ ಮುನೀನಾಂ ಮಧ್ವರೂಪಧೃಕ್ ।
ಸ ಏವ ಧಾರಯೇದ್ವಾಯುರನ್ಯತ್ರ ಗುರುಷು ಸ್ಥಿತಃ ॥ ಯು.ಮ

ಅನ್ಯತ್ರ ಮಧ್ವರೂಪಾದನ್ಯತ್ರ ಗುರುಷು ಮುದ್ರಾಧಾರಣಕರ್ತೃಷು ಪರಮಹಂಸೇಷು ಸ್ಥಿತಃ ಅಂತರ್ಯಾಮೀ ॥ ಯು.ಮ.ವ್ಯಾ

ಪ್ರತಪ್ತಂ ಚಕ್ರಮಾದಾಯ ಮಂತ್ರೇಣೈವಾಂಕಯೇದ್ಗುರುಃ ।
ಶಂಖೇನೈವಾಂಕನಂ ಕುರ್ಯಾದ್ಬಾಹ್ವೋಃ ದಕ್ಷಿಣಸವ್ಯಯೋಃ ॥ ರಾ.ಮ

''ಅಂಕನಂ ಕುರ್ಯಾತ್'' ''ಅಂಕಯೇದ್ಗುರುಃ'' ಇತಿ ದ್ವಿರುಕ್ತಿಸ್ತು ಗುರುರೇವಾಂಕಯೇನ್ನಾನ್ಯಃ ಇತ್ಯವಧಾರಣಾರ್ಥೇತಿ ॥ ರಾ.ಮ.ಟೀ

ತಸ್ಮಾತ್ತು ವಿಧಿನಾ ಬ್ರಹ್ಮನ್ ಗೃಹ್ಣೀಯಾತ್ ಸದ್ಗುರೋರಪಿ ।
ಯತೀನಾಂ ಯತಯಃ ಪ್ರೋಕ್ತಾಃ ಗುರವೋಽನ್ಯೇ ನ ಹಿ ಕ್ವಚಿತ್ ॥

ಯತೀನಾಂ ಯತಯಃ ಯತಿಶ್ರೇಷ್ಠಾಃ ತಪ್ತಮುದ್ರಾಂಕನಾಧಿಕೃತಾ ಯತೀಶ್ವರಾಃ ಸ್ವಸದ್ಗುರವಃ ॥ ರಾ.ಮ.ಟೀ

ವಾದಿರಾಜತೀರ್ಥರ, ಸುರೋತ್ತಮತೀರ್ಥರ ಮತ್ತು ಸತ್ಯಾಭಿನವತೀರ್ಥರ ಈ ಎಲ್ಲ ವಚನಗಳನ್ನು ಗಮನಿಸಿದಾಗ, ತಪ್ತಮುದ್ರಾಧಾರಣೆಯನ್ನು ಗೃಹಸ್ಥರಿಂದಾಗಲೀ, ಮತ್ತೊಬ್ಬ ಯತಿಗಳಿಂದಲಾಗಲೀ ಸ್ವೀಕರಿಸುವುದು ಉಚಿತವಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಸ್ವಸ್ವಗುರುಗಳಿಂದಲೇ ಅರ್ಥಾತ್ ತಮ್ಮ ತಮ್ಮ ಮಠದ ಯತಿಗಳಿಂದಲೇ ತಪ್ತಮುದ್ರಾಧಾರಣೆಯನ್ನು ಮಾಡಿಕೊಳ್ಳುವುದು ಸೂಕ್ತವಾಗುತ್ತದೆ.

ಈ ನಾಮಮುದ್ರಾಧಾರಣೆಯ ವಿಧಾನಗಳು ಅಜ್ಞಾನಿಗಳಿಗೆಂದು ಭಾವಿಸುವದು ಸರಿಯಲ್ಲ. ಜ್ಞಾನಿಗಳಾದವರು ಕೂಡಾ ಈ ವಿಧಾನಗಳನ್ನು ಕಡ್ಡಾಯವಾಗಿ ಪಾಲಿಸಬೇಕು.

ಪುಂಡ್ರಧಾರಣೆ ಇದೊಂದು ದೀಕ್ಷೆ. ಇದು ಬಾಹ್ಯದೀಕ್ಷೆ. ನಾನು ಶ್ರೀಹರಿಯ ದಾಸನೆಂದು ತಿಳಿಸಿಕೊಡಲು ಬಾಹ್ಯದೇಹಕ್ಕೆ ತೊಡಿಸಬೇಕಾದ ದೀಕ್ಷೆ. ಹೀಗಾಗಿ ಬಾಹ್ಯದೀಕ್ಷೆ. ಅಂತೆಯೆ ಇದು ವಿಷ್ಣುದೀಕ್ಷೆ.

ಈ ವಿಷ್ಣುದೀಕ್ಷೆ ಎರಡು ಬಗೆಯದ್ದಾಗಿದೆ. ಇದೀಗ ತಿಳಿದಂತೆ ''ಬಾಹ್ಯದೀಕ್ಷೆ'' ಒಂದು ಬಗೆಯದ್ದಾದರೆ ''ಆಂತರದೀಕ್ಷೆ'' ಎರಡನೆಯದ್ದು. ಈ ಆಂತರ-ದೀಕ್ಷೆಯನ್ನು ಬೆಳಿಸಿ, ಬೆಳಗಿಸುವ ದೀಕ್ಷೆ ಬಾಹ್ಯದೀಕ್ಷೆ. ಹೀಗಾಗಿ ಇದು ಅತ್ಯಂತ ಅನಿವಾರ್ಯ. ಪರಿಹಾರ್ಯವಲ್ಲ.

**೩. ಆಂತರದೀಕ್ಷೆ**

ಆಂತರದೀಕ್ಷೆ ಯಾವುದೆಂದು ತಿಳಿಸುವ ವಿಷ್ಣುರಹಸ್ಯದ ವಚನ ಹೀಗಿದೆ-

ಅಯಂ ಸರ್ವೇಷ್ಟದಾತಾ ಮೇ ಸರ್ವಾನಿಷ್ಟನಿವಾರಕಃ ।
ಸರ್ವೋತ್ಕೃಷ್ಟೋಽಯಮೇವೈಕಃ ತದೀಯೋಽಹಂ ಸ ಮೇ ಪತಿಃ ।
ಇತಿ ಜ್ಞಾನಂ ನಿಶ್ಚಲಂ ತು ಸಾ ದೀಕ್ಷಾ ಹ್ಯಾಂತರೀ ಮತಾ ॥ ವಿ.ರ

ನಮ್ಮೆಲ್ಲರ ಇಷ್ಟಗಳನ್ನು ಪೂರೈಸುವ ಅಭೀಷ್ಟದೈವ ಶ್ರೀಮನ್ನಾರಾಯಣ. ಕ್ಷಣಕ್ಷಣಕ್ಕೂ ಮುತ್ತಿಗೆ ಹಾಕಿ ನಮ್ಮನ್ನು ಸೋಲಿಸುತ್ತಿರುವ ಸಂಕಟಗಳನ್ನು ಪರಿಹರಿಸುವ ಧೀರನಾದ ದೊರೆ ಶ್ರೀವಿಷ್ಣು. ''ಅವನು ಸರ್ವೋತ್ಕೃಷ್ಟ, ಸರ್ವೋತ್ತಮ. ನಾನವನ ದಾಸಕೋಟಿಪ್ರವಿಷ್ಟ ನನಗವನು ಏಕಮೇವಾದ್ವಿತೀಯ ಒಡೆಯ'' ಚಾಂಚಲ್ಯಕ್ಕೊಳಗಾಗದ ಈ ಬಗೆಯ ಅರಿವು ಆಂತರದೀಕ್ಷೆ. ಇದು ಕೂಡಾ ವಿಷ್ಣುದೀಕ್ಷೆ.

ಆಂತರ ತಿಮಿರವ ತರಿದು ಹಾಕುವ ಈ ಆಂತರದೀಕ್ಷಾದೀಪವನ್ನು ಆರದ ಹಾಗೆ ಬೆಳಗಿಸುವ ದೀಕ್ಷೆ ಬಾಹ್ಯದೀಕ್ಷೆ.

ಈ ಬಗೆಯ ದೀಕ್ಷೆಗಳನ್ನು ಪಡೆಯದ ಮನುಷ್ಯ ಹರಿಯ ಪೂಜೆಗೆ ಅನರ್ಹ. ಹೀಗೆಂದು ತಿಳಿಸುವ ಹಾರೀತರ ವಚನವಿದು. ಗಮನಿಸಿ-

ನಾದೀಕ್ಷಿತಃ ಪ್ರಕುರ್ವೀತ ವಿಷ್ಣೋರಾರಾಧನಕ್ರಿಯಾಮ್ ॥ ಹಾ.ಸ್ಮೃ

ಇದನ್ನು ಮತ್ತಷ್ಟು ನಿಖರವಾಗಿ, ನಿಷ್ಠುರವಾಗಿ ತಿಳಿಸುವ ಆಚಾರ್ಯರ ವಚನವೈಖರಿ ಹೀಗಿದೆ.

ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವನೇ ಫಲಮ್ ।
ಯೈರ್ನ ಲಬ್ಧಾ ಹರೇರ್ದೀಕ್ಷಾ ನಾಽರ್ಚಿತೋ ವಾ ಜನಾರ್ದನಃ ॥
ಕೃ.ಮ

ಆಂತರ-ಬಾಹ್ಯವೆಂಬ ಎರಡು ತರಹದ ದೀಕ್ಷೆಗಳನ್ನು ಪಡೆದವನೇ ತನ್ನ ತನ್ನ ಸಾಧನೆಗೆ ಅರ್ಹನಾಗುತ್ತಾನೆ. ದೀಕ್ಷಿತನಾಗದ ನರ ವಾನರ. ಅವನ ಬದುಕು ಕ್ಷುದ್ರ. ಎಂದೆಂದೂ ಅವನ ಬಾಳಿಗ ಏಳಿಗೆ ಇಲ್ಲ. ಆದ್ದರಿಂದ ಹರಿಯ ದೀಕ್ಷೆಯನ್ನು ಪಡೆಯುವುದು ಹರಿಯನ್ನಾರಾಧಿಸುವುದು ಇದು ಫಲವು ಬಾಳ್ವುದಕೆ.

## ೪. ವಿಷ್ಣುದೀಕ್ಷೆಗೆ ಜಾತಿಯ, ಲಿಂಗದ ಭೇದವಿಲ್ಲ

ಊರ್ಧ್ವಪುಂಡ್ರಂ ತು ಸರ್ವೇಷಾಂ ನ ನಿಷಿದ್ಧಂ ಕದಾಚನ ।
ಧಾರಯೇತ್ ಕ್ಷತ್ರಿಯಾದ್ಯೋಽಪಿ ವಿಷ್ಣುಭಕ್ತೋ ಭವೇದ್ಯದಿ ॥ ಪ.ಪು

ಊರ್ಧ್ವಪುಂಡ್ರವನ್ನು ಎಲ್ಲರೂ ಕಡ್ಡಾಯವಾಗಿ ಧರಿಸಬೇಕು. ಯಾರಿಗೂ ಯಾವ ಪ್ರಸಂಗದಲ್ಲಿಯೂ ಇದು ನಿಷಿದ್ಧವಲ್ಲ. ಕ್ಷತ್ರಿಯ-ವೈಶ್ಯ-ಶೂದ್ರರು ಎಲ್ಲಜಾತಿಯ ಸ್ತ್ರೀಯರು ಕೂಡಾ ಊರ್ಧ್ವಪುಂಡ್ರವನ್ನು ಧರಿಸಬೇಕು.

ನೀಚವರ್ಣೋಽಪಿ ಯೋ ವಿಷ್ಣುದೀಕ್ಷಾವಾನ್ ಸ ಹಿ ಬಂಧುವತ್ ।
ವಿನಾ ಪ್ರಣಾಮಂ ಮಾನ್ಯಃ ಸಃ ರಾಮಕೃಷ್ಣಾದಿನಾಮಭಿಃ ॥

ನಾರೀ ವಾ ಪುರುಷೋ ವಾಽಪಿ ತಪ್ತಚಕ್ರಾಂಕವರ್ಜಿತಃ ।
ಶ್ಮಶಾನಕಾಷ್ಠವತ್ತಸ್ಯ ಸ್ಪರ್ಶೇ ಸ್ನಾನಂ ಸಮಾಚರೇತ್ ॥ ವಿ.ರ

ಶೂದ್ರಜಾತಿಯವರು ಕೂಡಾ ಎರಡುವಿಧವಾದ ವಿಷ್ಣುದೀಕ್ಷೆಗೆ ಅವರು ಕೂಡಾ ಅರ್ಹರಾಗಿದ್ದಾರೆ. ಜಾತಿಮತಭೇದವಿಲ್ಲದೆ ಆಚರಿಸಬಹುದಾದ ಸರ್ವಸಾಮಾನ್ಯಧರ್ಮ ಇದಾಗಿದೆ. ವಿಷ್ಣುದೀಕ್ಷೆಯನ್ನು ಪಡೆದವರು ಪರಸ್ಪರ ಬಂಧುಗಳಂತೆ. ಉತ್ತಮರಾದವರು ಕೂಡಾ ತಮಗಿಂತಲೂ ಸಣ್ಣವರಾದ ವೈಷ್ಣವರಿಗೆ ತಕ್ಕುದಾದ ಗೌರವವನ್ನು ಕೊಡಲೇಬೇಕು. ಆದರೆ ನಮಸ್ಕಾರವನ್ನು ಮಾತ್ರ ಮಾಡಬಾರದು. ಅವನ ಜೊತೆಗೆ ವ್ಯವಹರಿಸುವಾಗ 'ರಾಮ' 'ಕೃಷ್ಣ' ಎಂಬ ಹೆಸರಿನಿಂದಲೇ ವ್ಯವಹರಿಸಬೇಕು. ಹೀಗೆ ಅವರ ಜೊತೆ ವ್ಯವಹರಿಸುವುದು ಅವರಿಗೆ ನೀಡುವ ಸನ್ಮಾನವೆಂದು ವಿಷ್ಣುರಹಸ್ಯ ತಿಳಿಸುತ್ತದೆ.

ಲಿಂಗಭೇದವೂ ಇಲ್ಲದೇ ಪಡೆಯಲೇ ಬೇಕಾದ ದೀಕ್ಷೆ ಇದಾಗಿದೆ. ಈ ದೀಕ್ಷೆಯನ್ನು ಪಡೆಯದ ಪುರುಷರಾಗಲೀ ಸ್ತ್ರೀಯರಾಗಲೀ ಅವರು ಅಸ್ಪೃಶ್ಯರಾಗುತ್ತಾರೆ.

## ೫. ವಿಷ್ಣುದೀಕ್ಷೆಯನ್ನು ಪಡೆಯದವ ಅಪಾತ್ರ

ಉಚ್ಚವರ್ಣೋಽಪಿ ಯೋ ವಿಪ್ರೋ ವೇದವೇದಾಂತಪಾರಗಃ ।
ಸದಾಚಾರರತೋಽಪಿ ಸ್ಯಾದ್ವಿಷ್ಣುದೀಕ್ಷಾವಿವರ್ಜಿತಃ ।
ಸ ಚೋರವದ್ ಬಹಿಷ್ಕಾರ್ಯಃ ತಸ್ಮೈ ದತ್ತಂ ಚ ನಿಷ್ಫಲಮ್ ॥

ಸ್ವಯಂ ಉಚ್ಚವರ್ಣದ ಬ್ರಾಹ್ಮಣನಾಗಿದ್ದರೂ, ವೇದವೇದಾಂಗಗಳನ್ನು ಅಧ್ಯಯನ ಮಾಡಿದವನಾಗಿದ್ದರೂ, ಸದಾಚಾರತತ್ಪರನಾಗಿದ್ದರೂ, ವಿಷ್ಣುದೀಕ್ಷಾ-ವಿವರ್ಜಿತನಾದವನು ಕಳ್ಳನಂತೆ ಬಹಿಷ್ಕಾರಕ್ಕೆ ಯೋಗ್ಯನಾಗಿದ್ದಾನೆ. ಇಂಥವನಿಗೆ ಹವ್ಯ-ಕವ್ಯ ಮೊದಲಾದ ಯಾವುದೆ ಪ್ರಸಂಗದಲ್ಲಿ ದಾನವನ್ನು ಮಾಡಕೂಡದು. ಇವನಿಗೆ ಮಾಡಿದ ದಾನ-ಮಾನ ವ್ಯರ್ಥವಾಗುತ್ತದೆ.

**೬. ವಿಷ್ಣುದೀಕ್ಷಾವಿಶಿಷ್ಟನಾದವನು ಸತ್ಪಾತ್ರ**

ಪಾತ್ರಂ ಹಿ ಪರಮಂ ಪ್ರೋಕ್ತಂ ಹವ್ಯಕವ್ಯಾದಿಕೇ ಸದಾ ।
ಯಸ್ಯ ಸ್ಯಾದ್ವೈಷ್ಣವೀ ದೀಕ್ಷಾ ದತ್ತಂ ಭವತಿ ಚಾಽಕ್ಷಯಮ್ ॥ ಎ.ರ

ವಿಷ್ಣುದೀಕ್ಷೆಯನ್ನು ಪಡೆದ ವ್ಯಕ್ತಿ ಯಜ್ಞ-ಯಾಗಮೊದಲಾದ ಪ್ರಸಂಗದಲ್ಲಿ ಶ್ರಾದ್ಧ ಮೊದಲಾದ ಪ್ರಸಂಗದಲ್ಲಿಯೂ ಯೋಗ್ಯನಾದ ಪಾತ್ರ. ಅವನಿಗೆ ನೀಡಿದ ದಾನ ಅಕ್ಷಯವಾದ ಫಲವನ್ನು ನೀಡುತ್ತದೆ. ಇದರಲ್ಲಿ ಸಂದೇಹಕ್ಕೆ ಆಸ್ಪದವಿಲ್ಲ. ಶ್ರಾದ್ಧಮೊದಲಾದ ಪ್ರಸಂಗಗಳಲ್ಲಿ ವಿಷ್ಣುದೀಕ್ಷಾವಿಶಿಷ್ಟನಾದ ಶೂದ್ರನಿಗೂ ಅನ್ನಾದಿದಾನವನ್ನು ಮಾಡಬೇಕೆಂದು ಶಾಸ್ತ್ರ ವಿಧಿಸುತ್ತದೆ. ವಿಶಿಷ್ಟವಾದ ಪದಾರ್ಥಗಳನ್ನು ದಾನಮಾಡುವಾಗ ಯೋಗ್ಯನಾದ ಬ್ರಾಹ್ಮಣನನ್ನು ಹುಡುಕಿ ದಾನಮಾಡಬೇಕು. ಇದನ್ನು ಎಚ್ಚರಿಕೆಯಿಂದ ಪಾಲಿಸಬೇಕು.

**೭. ವಿಷ್ಣುದೀಕ್ಷೆಯಿಂದಲೆ ಸೌಭಾಗ್ಯ**

ಪತ್ಯುಶ್ಚಿಹ್ನಂ ಯಥಾ ನಾರೀ ಕಂಠಸೂತ್ರಂ ಬಿಭರ್ತಿ ಹಿ ।
ಸನಾಥಾ ಸುಭಗಾ ತೇನ ಪೂತಗಾತ್ರಾ ಚ ಜಾಯತೇ ।
ಅನ್ಯಥಾ ಚಾಪವಿತ್ರಾಂಗೀ ದೀಕ್ಷಾಹೀನಸ್ತಥಾ ನರಃ ॥ ಎ.ರ

ಕಂಠಸೂತ್ರ ಸ್ತ್ರೀಯರ ಸೌಭಾಗ್ಯಸೂಚಕವಾಗಿರುತ್ತದೆ. ಹೀಗಾಗಿ ಅದನ್ನು ಯಾವಾಗಲೂ ಸ್ತ್ರೀಯರು ಧರಿಸುತ್ತಾರೆ. ಅಂಥವಳ ದೇಹವೂ ಪವಿತ್ರ-ವಾಗಿರುತ್ತದೆ. ಅಂತಹ ಮಾಂಗಲ್ಯವನ್ನು ತೆಗೆದಿಟ್ಟವಳು ಅಪವಿತ್ರಳೆಂದು ಲೋಕವು ಭಾವಿಸುತ್ತದೆ. ಅವಳು ಶುಭಕರ್ಮಗಳಲ್ಲಿ ಅನರ್ಹಳೆಂದು ಲೋಕ ತೀರ್ಮಾನಿಸುತ್ತದೆ. ಹಾಗೆಯೆ ವಿಷ್ಣುದೀಕ್ಷೆಯಿಂದ ರಹಿತನಾದವನು ಅಪವಿತ್ರ-ನೆನಿಸಿಕೊಳ್ಳುತ್ತಾನೆ. ಅವನಿಗೆ ಲೋಕದಲ್ಲಿ ಯಾವುದೇ ಗೌರವವಿರುವುದಿಲ್ಲ.

ಶುಭಕರ್ಮಗಳಲ್ಲಿ ಅವನಿಗೆ ಆಸ್ಪದವಿರುವದಿಲ್ಲ. ಶ್ರಾದ್ಧಾದಿಕರ್ಮಗಳಿಗೂ ಅವನು ಅನರ್ಹನಾಗಿರುತ್ತಾನೆ. ಈ ವಿಷಯದಲ್ಲಿ ಎಚ್ಚರಿಕೆಯಿಂದ ಇರಬೇಕು.

(ಆದ್ದರಿಂದ ಈ ದೀಕ್ಷೆಯನ್ನು ತನ್ನ ಗುರುಗಳಿಂದಲೆ ಪಡೆಯಬೇಕು. ಮತ್ತೊಬ್ಬರಿಂದ ಸರ್ವಥಾ ಈ ದೀಕ್ಷೆಯನ್ನು ಸ್ವೀಕರಿಸಬಾರದು. ಹೀಗೆಂದು ವಿಷ್ಣುರಹಸ್ಯ ಈ ದೃಷ್ಟಾಂತದಿಂದ ಸೂಚಿಸುತ್ತದೆ.)

**೮. ಪುಂಡ್ರಧಾರಣೆ ಒಂದು ಸಂಸ್ಕಾರ**

ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಶ್ಚ ಪಂಚಮಃ ।
ಅಮೀ ಹಿ ಪಂಚ ಸಂಸ್ಕಾರಾಃ ವೈಷ್ಣವತ್ವಸ್ಯ ಹೇತವಃ ॥ ತಾ.ಕೃ.ವ್ಯಾ

ವಿಷ್ಣುರಹಸ್ಯ ಪುಂಡ್ರಧಾರಣೆಯನ್ನು ಒಂದು ದೀಕ್ಷೆ ಎಂದು ತಿಳಿಸುತ್ತದೆ. ಮತ್ತೊಂದು ಸ್ಮೃತಿ ಪುಂಡ್ರಧಾರಣೆಯನ್ನು ಒಂದು ಸಂಸ್ಕಾರ ಎಂಬುದಾಗಿ ತಿಳಿಸುತ್ತದೆ. ಈ ಸ್ಮೃತಿ ಸಾಧಕರಿಗೆ ಆವಶ್ಯಕವಾದ ಐದು ಸಂಸ್ಕಾರಗಳನ್ನು ತಿಳಿಸುತ್ತದೆ.

1) ತಪ್ತಮುದ್ರಾಧಾರಣೆ 2) ಪುಂಡ್ರಧಾರಣೆ 3) ನಾಮಧಾರಣೆ 4) ಮಂತ್ರಸ್ವೀಕಾರ 5) ವಿಷ್ಣೂದ್ದೇಶಕವಾದ ಯಾಗಗಳು.

ಈ ಸಂಸ್ಕಾರಗಳಲ್ಲಿ ಪುಂಡ್ರಧಾರಣೆಯೂ ಒಂದಾಗಿದೆ. ಈ ಸಂಸ್ಕಾರಗಳಿಲ್ಲದವನು ಕರ್ಮಾನರ್ಹನಾಗುತ್ತಾನೆ. ಆದ್ದರಿಂದ ಈ ಸಂಸ್ಕಾರಗಳಿಂದ ಸಂಸ್ಕೃತನಾಗುವುದು ಎಲ್ಲರಿಗೂ ಆವಶ್ಯಕವಾಗಿದೆ.

**೯. ಪುಂಡ್ರಧಾರಣೆ ನವವಿಧಭಕ್ತಿಗಳಲ್ಲಿ ಒಂದು**

ಶಂಖಚಕ್ರೋರ್ಧ್ವಪುಂಡ್ರಾದಿಧಾರಣಂ ಸ್ಮರಣಂ ಹರೇಃ ।
ತನ್ನಾಮಕೀರ್ತನಂ ಚೈವ ತತ್ಪಾದಾಂಬುನಿಷೇವಣಮ್ ॥
ತತ್ಪಾದವಂದನಂ ಚೈವ ತನ್ನಿವೇದಿತಭೋಜನಮ್ ।
ಏಕಾದಶ್ಯುಪವಾಸಶ್ಚ ತಸ್ಯೈವಾಽಭ್ಯರ್ಚನಂ ಹರೇಃ ॥
ತದೀಯಾನಾಮರ್ಚನಂ ಚ ಭಕ್ತಿರ್ನವವಿಧಾ ಸ್ಮೃತಾ ।
ಏತೈರ್ನವವಿಧೈರ್ಯುಕ್ತೋ ವೈಷ್ಣವಃ ಪ್ರೋಚ್ಯತೇ ಬುಧೈಃ ॥ ವೃ.ಹಾ.ಸ್ಮೃ

ವೃದ್ಧಹಾರೀತರ ಪ್ರಕಾರ ಪುಂಡ್ರಧಾರಣೆ ನವವಿಧಭಕ್ತಿಗಳಲ್ಲಿ ಒಂದಾಗಿದೆ. ಭಾಗವತದಲ್ಲಿ ಉಕ್ತವಾದ ನವವಿಧಭಕ್ತಿಗಳಲ್ಲದೇ ಹಲವು ಹೊಸಬಗೆಯ ಭಕ್ತಿಗಳನ್ನು ಈ ಸ್ಮೃತಿಯಲ್ಲಿ ಉಲ್ಲೇಖಿಸಿದ್ದಾರೆ. ಇಲ್ಲಿ ಭಕ್ತಿ ಎಂದರೆ ಭಕ್ತಿಯನ್ನು ಬೆಳೆಸುವ ಸಾಧನಗಳೆಂದೇ ಅರ್ಥ. ಹೊರತು ಇವುಗಳು ಭಕ್ತಿಯ ಸ್ವರೂಪವಲ್ಲ. ಇದನ್ನು ನಾವಿಲ್ಲಿ ಗಮನಿಸಬೇಕು.

1. ಶಂಖ,ಚಕ್ರ, ಊರ್ಧ್ವಪುಂಡ್ರಮೊದಲಾದವುಗಳನ್ನು ಧರಿಸುವದು.

2. ಭಗವಂತನನ್ನು ಮನಸಾ ಸ್ಮರಿಸುವದು.

3. ಅವನ ನಾಮಗಳನ್ನು ನಾಲಿಗೆಯಿಂದ ಉಚ್ಚರಿಸುವದು.

4. ಅವನ ಪಾದವನ್ನು ತೊಳೆದ ಜಲವನ್ನು ಅರ್ಥಾತ್ ತೀರ್ಥವನ್ನು ಸ್ವೀಕರಿಸುವದು.

5. ಭಗವಂತನ ಪಾದಕಮಲಗಳನ್ನು ಸದಾ ನಮಸ್ಕರಿಸುತ್ತಿರುವದು.

6. ಭಗವಂತನಿಗೆ ಮಾತ್ರ ನಿವೇದಿಸಿದ ಆಹಾರವನ್ನು ಸ್ವೀಕರಿಸುವದು.

7. ಏಕಾದಶಿಯಂದು ನಿರಾಹಾರದಿಂದಿದ್ದು ಭಗವಂತನನ್ನು ಸ್ತುತಿಸುವದು.

8. ಸ್ವತಂತ್ರನೆಂದು ಭಗವಂತನನ್ನು ಮಾತ್ರ ಪೂಜಿಸುವದು.

9. ಭಗವಂತನ ಭಕ್ತರನ್ನು ತದೀಯರೆಂದು ಅರ್ಥಾತ್ ಪರಿವಾರತಯಾ ಅರ್ಚಿಸುವುದು.

ಹೀಗೆ ಭಕ್ತಿ ನವವಿಧವಾಗಿದೆ. ಈ ನವವಿಧವಾದ ಭಕ್ತಿಗಳಿಂದ ಯುಕ್ತನಾದವನು ಯಾವ ಜಾತಿಯವನೇ ಆಗಿರಲಿ ಅವನನ್ನು ವೈಷ್ಣವನೆಂದು ಜ್ಞಾನಿಗಳು ವ್ಯವಹರಿಸುತ್ತಾರೆ. ವೈಷ್ಣವತ್ವಸಂಪಾದಕವಾದ ನವವಿಧವಾದ ಭಕ್ತಿಗಳಲ್ಲಿ ಮೊದಲನೆಯ ಭಕ್ತಿಯೆ ಈ ''ಪುಂಡ್ರಧಾರಣೆ ''ಇದನ್ನು ಗಮನಿಸಬೇಕು.

ಒಟ್ಟಾರೆ ಚಿಂತಿಸುವುದಾದರೆ ಪುಂಡ್ರಧಾರಣೆ ಇದೊಂದು ದೀಕ್ಷೆ ಮತ್ತೊಂದು ರೀತಿಯಲ್ಲಿ ಅದು ಆವಶ್ಯಕವಾದ ಸಂಸ್ಕಾರ, ಇನ್ನೊಂದು ರೀತಿಯಲ್ಲಿ ವೈಷ್ಣವತ್ವಸಂಪಾದಕವಾದ ಭಕ್ತಿ ಇದಾಗಿದೆ. ಹೀಗಾಗಿ ಪುಂಡ್ರಧಾರಣೆಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಎಲ್ಲಜಾತಿಯ ಸ್ತ್ರೀಯರೂ ಸಹ ನಿಷ್ಠೆಯಿಂದ ಪಾಲಿಸಬೇಕು.

**೧೦. ವೈಷ್ಣವತ್ವದ್ಯೋತಕ**

ಚಕ್ರಾದಿಧಾರಣಂ ಪುಂಸಾಂ ಪರಸಂಬಂಧವೇದನಮ್ ।
ಸಂಸ್ಕಾರಾಣಾಂ ತು ಸರ್ವೇಷಾಮಾದ್ಯಂ ಚಕ್ರಸ್ಯ ಧಾರಣಮ್ ॥

ವೃ.ಹಾ.ಸ್ಮೃ

ಪರಮಾತ್ಮನ ಭಕ್ತರು ನಾವೆಂಬುದನ್ನು ಸಾರಿ ತಿಳಿಸುವುದಕ್ಕಾಗಿ ಚಕ್ರಮೊದಲಾದ ಚಿಹ್ನೆಗಳನ್ನು ಧರಿಸಬೇಕು. ನಾಮಕರಣ ಮೊದಲಾದ ಎಲ್ಲ ಸಂಸ್ಕಾರಗಳಲ್ಲಿ ಪ್ರಧಾನವಾಗಿ, ಮೊದಲಿಗೆ ಚಕ್ರಾದಿಗಳನ್ನು ಧರಿಸಬೇಕು.

**೧೧. ವೈಷ್ಣದೀಕ್ಷೆಯಿಂದ ಯುಕ್ತನಾದವನೇ ಸತ್ಪಾತ್ರ**

ಪಾತ್ರಂ ಹಿ ಪರಮಂ ಪ್ರೋಕ್ತಂ ಹವ್ಯಕವ್ಯಾದಿಕೇ ಸದಾ ।
ಯಸ್ಯ ಸ್ಯಾದ್ವೈಷ್ಣವೀ ದೀಕ್ಷಾ ದತ್ತಂ ಭವತಿ ಚಾಕ್ಷಯಮ್ ॥ ವಿ.ರ

ವಿಷ್ಣುದೀಕ್ಷೆಯನ್ನು ಪಡೆದ ವ್ಯಕ್ತಿ ಯಜ್ಞಯಾಗಮೊದಲಾದ ಪ್ರಸಂಗದಲ್ಲಿ-ಯಾಗಲೀ, ಶ್ರಾದ್ಧ ಮೊದಲಾದ ಪ್ರಸಂಗದಲ್ಲಿಯಾಗಲೀ ಯೋಗ್ಯನಾದ ಪಾತ್ರ. ಅವನಿಗೆ ನೀಡಿದ ದಾನ ಅಕ್ಷಯ್ಯವಾದ ಫಲವನ್ನು ನೀಡುತ್ತದೆ. ಇದರಲ್ಲಿ ಯಾವುದೆ ತರಹದ ಸಂದೇಹಕ್ಕೆ ಆಸ್ಪದವಿಲ್ಲ.

**೧೨. ಪುಂಡ್ರವನ್ನು ಧರಿಸುವದು ಹೇಗೆ?**

ತನ್ನ ಮನಸ್ಸಿಗೆ ಬಂದಂತೆ ಪುಂಡ್ರವನ್ನು ಧರಿಸುವುದು ಸೂಕ್ತವಾಗುವದಿಲ್ಲ. ಶಾಸ್ತ್ರ ಹೇಳಿದಂತೆ ಅದನ್ನು ಧರಿಸಬೇಕು. ಈ ವಿಷಯದಲ್ಲಿ ವಾಧೂಲಸ್ಮೃತಿ ತಿಳಿಸುವ ವಚನಗಳನ್ನು ಅವಲೋಕಿಸೋಣ-

ಊರ್ಧ್ವಗತ್ಯಾಂ ತು ಯಸ್ಯೇಚ್ಛಾ ತಸ್ಯೋರ್ಧ್ವಂ ಪುಂಡ್ರಮುಚ್ಯತೇ ।
ಊರ್ಧ್ವಗತ್ಯಾಂ ತು ದೇವತ್ವಂ ಸ ಪ್ರಾಪ್ನೋತಿ ನ ಸಂಶಯಃ ॥ ವಾ.ಸ್ಮೃ
ಪುಂಡ್ರೋ ಹಿ ಧ್ರಿಯತೇ ನಿತ್ಯಂ ಬ್ರಹ್ಮನಾಡ್ಯನುಸಾರತಃ ॥

ಯಾವ ಉದ್ದೇಶವೂ ಇಲ್ಲದೆ ಪುಂಡ್ರಧಾರಣೆಯನ್ನು ಶಾಸ್ತ್ರವಿಧಾನಮಾಡಿಲ್ಲ. ಕಿಂತು ಊರ್ಧ್ವಗತಿಯ ಉದ್ದೇಶ ಪುಂಡ್ರಧಾರಣೆಗೆ ಮೂಲವಾಗಿದೆ. ಹೀಗಾಗಿ ಊರ್ಧ್ವಗತಿಯನ್ನು ಬಯಸುವವರೆಲ್ಲ ಊರ್ಧ್ವವಾಗಿಯೇ ಪುಂಡ್ರವನ್ನು ಧರಿಸಬೇಕು. ಊರ್ಧ್ವಗಮನದಿಂದ ಸಾಧಕರಾದವರು ದೇವತೆಗಳ ಲೋಕಗಳನ್ನು ಪಡೆಯುತ್ತಾರೆ. ಈ ವಿಷಯದಲ್ಲಿ ಸಂದೇಹವಿರುವದಿಲ್ಲ.

ಇದಲ್ಲದೆ ಬ್ರಹ್ಮನಾಡಿಗೆ ಅನುಗುಣವಾಗಿ ಪುಂಡ್ರವನ್ನು ಧರಿಸಬೇಕು. ದೇಹದಲ್ಲಿ ಬ್ರಹ್ಮನಾಡಿ ಋಜುವಾಗಿ, ಊರ್ಧ್ವವಾಗಿ ಇರುತ್ತದೆ. ಅಡ್ಡಾದಿಡ್ಡಿಯಾಗಿ ಇರುವುದಿಲ್ಲ. ಆದ್ದರಿಂದ ಊರ್ಧ್ವವಾಗಿಯೇ ಪುಂಡ್ರವನ್ನು ಧರಿಸಬೇಕೆಂಬುದು ಸ್ಮೃತಿಯ ಆದೇಶವಾಗಿದೆ.

**೧೩. ತಿರ್ಯಕ್ ಪುಂಡ್ರವೋ ? ಊರ್ಧ್ವಪುಂಡ್ರವೋ ?**

ತಿರ್ಯಕ್ಪುಂಡ್ರಾದ್ಗತಿಸ್ತಿರ್ಯಕ್ ಊರ್ಧ್ವಪುಂಡ್ರಾತ್ತಥೋತ್ತರಾ ।
ಪುಂಡ್ರೋ ಹಿ ಧ್ರಿಯತೇ ನಿತ್ಯಂ ಬ್ರಹ್ಮನಾಡ್ಯನುಸಾರತಃ ॥ ಸ.ಪ

ಊರ್ಧ್ವಗತಿ ಬೇಕೆಂಬ ಬಯಕೆ ಇದ್ದವರೆಲ್ಲರೂ ಊರ್ಧ್ವಪುಂಡ್ರವನ್ನೇ ಧರಿಸಬೇಕು. ಊರ್ಧ್ವಗತಿ ದೈವತ್ವಸೂಚಕವಾಗಿರುತ್ತದೆ. ಊರ್ಧ್ವಪುಂಡ್ರವನ್ನು ಧರಿಸಿದವನು ದೈವಸ್ವಭಾವದವನಾಗುತ್ತಾನೆ.

ತಿರ್ಯಕ್ ಪುಂಡ್ರವನ್ನು ಸರ್ವಥಾ ಧರಿಸಬಾರದು. ಇದು ತಿರ್ಯಗ್ಗತಿಗೆ ಸಾಧಕವಾಗಿದೆ. ಋಜುವಾದ ಜೀವನಕ್ಕೆ ಸೂಚಕವಾಗಿದೆ ಋಜುವಾದ ಪುಂಡ್ರ. ಆದ್ದರಿಂದ ನಿಷ್ಠೆಯಿಂದ ಈ ನಿಯಮವನ್ನು ಪಾಲಿಸಬೇಕು.

**೧೪. ಊರ್ಧ್ವಪುಂಡ್ರ ಧಾರಣೆ ಉತ್ತಮ ಯಾಕೆ ?**

ತತಸ್ತು ತಿಲಕಂ ಕುರ್ಯಾಜ್ಜಾತೇರ್ವಾ ದೈವತಸ್ಯ ವಾ ।
ಬ್ರಾಹ್ಮಣಸ್ಯೋರ್ಧ್ವಪುಂಡ್ರಂ ಸ್ಯಾತ್ ಕ್ಷತ್ರಿಯಸ್ಯ ತ್ರಿಪುಂಡ್ರಕಮ್ ॥

ಅರ್ಧಚಂದ್ರಂ ತು ವೈಶ್ಯಸ್ಯ ಶೂದ್ರಾಣಾಂ ವರ್ತುಲಾಕೃತಿಃ ।
ಊರ್ಧ್ವಪುಂಡ್ರಂ ಮೃದಾ ಕುರ್ಯಾತ್ ತ್ರಿಪುಂಡ್ರಂ ಚಾಪಿ ಭಸ್ಮನಾ ।
ಕೇಶರೇಣ ಚ ಕಸ್ತೂರ್ಯಾ ಶೇಷೇ ಶೀತಂ ಯಥಾರುಚಿ ॥

ವೈಷ್ಣವಸ್ಯೋರ್ಧ್ವಪುಂಡ್ರಃ ಸ್ಯಾತ್ ತ್ರಿಪುಂಡ್ರಂ ಶಿವಸೇವಿತುಃ ।
ಅರ್ಧಚಂದ್ರೋ ಗಣೇಶಸ್ಯ ದೇವೀಭಕ್ತಸ್ಯ ವರ್ತುಲಮ್ ॥ ಮೇ.ತಂ

ಮೇರುತಂತ್ರ ಎಂಬ ಗ್ರಂಥ ತಿಳಿಸುವ ಅಪೂರ್ವವಾದ ವಿಷಯವಿದಾಗಿದೆ. ತನ್ನ ಜಾತಿಗೆ, ತಾನು ನಂಬಿದ ದೇವರಿಗೆ ಅನುಗುಣವಾಗಿ ಪುಂಡ್ರಧಾರಣೆ ಇರಬೇಕು. ಬ್ರಾಹ್ಮಣನಾದವನು ಊರ್ಧ್ವಪುಂಡ್ರವನ್ನು ಕಡ್ಡಾಯವಾಗಿ

ಧರಿಸಬೇಕು. ಕ್ಷತ್ರಿಯನಾದವನು ತ್ರಿಪುಂಡ್ರವನ್ನು ಧರಿಸಬೇಕು. ವೈಶ್ಯನಾದವನು ಅರ್ಧಚಂದ್ರಾಕಾರವಾಗಿ ಪುಂಡ್ರವನ್ನು ಧರಿಸಬೇಕು. ಶೂದ್ರನಾದವನು ವರ್ತುಲವಾಗಿ ಪುಂಡ್ರವನ್ನು ಧರಿಸಬೇಕು.

ಇದು ಸ್ವಸ್ವಜಾತಿಗೆ ಅನುಗುಣವಾಗಿ ಪುಂಡ್ರವನ್ನು ಧರಿಸಬೇಕಾದ ನಿಯಮ.

ಊರ್ಧ್ವಪುಂಡ್ರವನ್ನು ಧರಿಸುವಾಗ ಗೋಪಿಚಂದನ ಮೊದಲಾದ ಮೃತ್ತಿಕಾಗಳನ್ನು ಉಪಯೋಗಿಸಬೇಕು. ತ್ರಿಪುಂಡ್ರವನ್ನು ಧರಿಸುವಾಗ ಭಸ್ಮವನ್ನು ಉಪಯೋಗಿಸಬೇಕು. ಅರ್ಧಚಂದ್ರದ ಆಕಾರದಲ್ಲಿ ಮತ್ತು ವರ್ತುಲಾಕಾರದಲ್ಲಿ ಪುಂಡ್ರವನ್ನು ಧರಿಸುವಾಗ ಕೇಸರ ಅಥವಾ ಕಸ್ತೂರಿಗಳನ್ನು ಬಳಸಬೇಕು.

ನಂಬಿದ ದೇವತೆಗೆ ಅನುಗುಣವಾಗಿ ಧರಿಸುವದಾದರೆ ವೈಷ್ಣವರು ಊರ್ಧ್ವಪುಂಡ್ರವನ್ನೇ ಧರಿಸಬೇಕು. ಶೈವರು ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಬೇಕು. ಗಾಣಪತರು ಅರ್ಧಚಂದ್ರದ ಆಕಾರದಲ್ಲಿ ಧರಿಸಬೇಕು. ದೇವೀಭಕ್ತರಾದವರು ವರ್ತುಲಾಕಾರದಲ್ಲಿ ಪುಂಡ್ರವನ್ನು ಧರಿಸಬೇಕು.

ಇಲ್ಲಿಯ ಮಾತುಗಳನ್ನು ನಾವು ಸೂಕ್ಷ್ಮವಾಗಿ ಗಮನಿಸಬೇಕು. ಜಾತಿಗಳಲ್ಲಿ ಬ್ರಾಹ್ಮಣಜಾತಿ ಉತ್ತಮವಾಗಿದೆ. ''ದ್ವಿಪದಾಂ ಬ್ರಾಹ್ಮಣಃ ಶ್ರೇಷ್ಠಃ'' ಎಂಬ ಮಹಾಭಾರತ ಮೊದಲಾದ ಸಚ್ಛಾಸ್ತ್ರಗಳ ಪ್ರಮಾಣ ಈ ವಿಷಯದಲ್ಲಿ ಇದೆ. ದೇವತೆಗಳಲ್ಲಿ ಸರ್ವೋತ್ತಮನಾದವನು ಶ್ರೀವಿಷ್ಣು. ಈ ವಿಷಯದಲ್ಲಿಯಂತೂ ಹೇರಳವಾಗಿ ಪ್ರಮಾಣಗಳಿವೆ. ಪುಂಡ್ರವನ್ನು ಧರಿಸುವ ಸಾಧನೆಗಳಲ್ಲಿ ಮೃತ್ತಿಕಾ ಶ್ರೇಷ್ಠವಾಗಿದೆ.

ಹೀಗೆ ಉತ್ತಮವಾದ ಬ್ರಾಹ್ಮಣಜಾತಿಗೆ ಅನುಗುಣವಾಗಿ, ಸರ್ವೋತ್ತಮನಾದ ಭಗವಂತನ ಭಕ್ತರೆಂಬುದನ್ನು ಸೂಚಿಸುವದಕ್ಕಾಗಿ, ಶ್ರೇಷ್ಠವಾದ ಗೋಪೀಚಂದನ ಮೊದಲಾದ ಮೃತ್ತಿಕೆಯಿಂದ ಧರಿಸುವ ಊರ್ಧ್ವಪುಂಡ್ರಧಾರಣೆ ಇದು ಉತ್ತಮವಾಗಿದೆ ಎಂದು ಸಿದ್ಧವಾಗುತ್ತದೆ. ಪ್ರಾಮಾಣಿಕವಾದ ಈ ವಿಷಯದಲ್ಲಿ ಯಾರೂ ಸಂದೇಹಪಟ್ಟುಕೊಳ್ಳುವ ಕಾರಣವಿಲ್ಲ.

ಮತ್ತೊಂದು ಮಾತನ್ನು ಇಲ್ಲಿ ಗಮನಿಸಬೇಕು. ಇತರ ಜಾತಿಯವರಾಗಿದ್ದರೂ ಶ್ರೀಹರಿಯನ್ನು ನಂಬಿ ನಡೆಯುವವರೆಲ್ಲರೂ ಮೃತ್ತಿಕೆಯಿಂದ

ಊರ್ಧ್ವಪುಂಡ್ರವನ್ನೇ ಧರಿಸಬೇಕು. ಹೊರತು ಆಯಾ ಜಾತಿಗೆ ಅನುಗುಣವಾಗಿ ಪುಂಡ್ರವನ್ನು ಧರಿಸತಕ್ಕದ್ದಲ್ಲ. ಇತರ ಜಾತಿಯವರೂ ಊರ್ಧ್ವಪುಂಡ್ರವನ್ನು ಧರಿಸಬೇಕೆಂಬ ವಿಷಯದಲ್ಲಿ ಪ್ರಮಾಣಗಳನ್ನು ಮುಂದೆ ಗಮನಿಸೋಣ.

ವಿಷ್ಣುರಹಸ್ಯ ಮತ್ತೊಂದು ವಿಶೇಷವಾದ ವಿಷಯವನ್ನು ತಿಳಿಸುತ್ತದೆ-

ಅತೋಽನ್ಯತಿಲಕಂ ನೃಣಾಂ ವಿಷ್ಣುವಿದ್ವೇಷಕಾರಣಮ್ ॥ ವಿ.ರ

ಊರ್ಧ್ವಪುಂಡ್ರವನ್ನು ಬಿಟ್ಟು ಮತ್ತೊಂದು ರೀತಿಯಲ್ಲಿ ತಿಲಕವನ್ನು ಧರಿಸಿದರೆ ಅದು ವಿಷ್ಣುವಿನ ದ್ವೇಷಕ್ಕೆ ಕಾರಣವಾಗುತ್ತದೆ. ವಿಷ್ಣುವಿನ ದ್ವೇಷ ತಮಸ್ಸಿಗೆ ಸಾಧನವಾಗುತ್ತದೆ. ಆದ್ದರಿಂದ ಸುಸೂತ್ರವಾಗಿ ಮುಕ್ತಿಯನ್ನು ಪಡೆಯಲಿಚ್ಛಿಸುವವರೆಲ್ಲರೂ ಕಡ್ಡಾಯವಾಗಿ ಊರ್ಧ್ವಪುಂಡ್ರವನ್ನೇ ಧರಿಸಬೇಕು. ಹೀಗಾಗಿ ಸಾಧಕರೆಲ್ಲರಿಗೂ ಅಭೀಷ್ಟವಾದ ಪರಮಾನಂದಾವಾಪ್ತಿರೂಪವಾದ ಮುಕ್ತಿಗೆ ಸಹಕಾರಿಯಾದುದರಿಂದಲೂ ಊರ್ಧ್ವಪುಂಡ್ರಧಾರಣೆ ಎಲ್ಲದಕ್ಕಿಂತಲೂ ಉತ್ತಮವಾದುದೆಂದು ಸಿದ್ಧವಾಗುತ್ತದೆ.

**೧೫. ಗೋಪೀಚಂದನದಿಂದ ಪುಂಡ್ರಧಾರಣೆ**

ಯಸ್ತು ಶ್ವೇತಮೃದಾ ಪುಂಡ್ರಾನ್ ಲೀಲಯಾಽಪಿ ಬಿಭರ್ತಿ ಚೇತ್ ।
ಗಂಗಾದಿತೀರ್ಥಯಾತ್ರಾಯಾಃ ಫಲಮಾಪ್ನೋತ್ಯಸಂಶಯಮ್ ॥
ಯೋ ಧಾರಯೇದೂರ್ಧ್ವಪುಂಡ್ರಾನ್ ಗೋಪೀಚಂದನತೋ ದ್ವಿಜಃ ।

ಶ್ವೇತವರ್ಣದ ಗೋಪೀಚಂದನದಿಂದ ಲೀಲೆಗೋಸ್ಕರ ಪುಂಡ್ರವನ್ನು ಧರಿಸಿದವರೂ ಗಂಗಾದಿತೀರ್ಥಯಾತ್ರೆಗಳ ಫಲವನ್ನು ಪಡೆಯುತ್ತಾರೆ. ಅತಿಶ್ರದ್ಧೆಯಿಂದ ಪುಂಡ್ರವನ್ನು ಧರಿಸಿದವರಿಗಂತೂ ಉನ್ನತವಾದ ಫಲವು ದೊರೆಯುತ್ತದೆ.

ಈ ವಿಷಯವನ್ನು ಸ್ಮೃತಿಮುಕ್ತಾವಲೀಕಾರರು ಈ ರೀತಿಯಾಗಿ ತಿಳಿಸುತ್ತಾರೆ.

ದೇವಾದ್ಯಾಚಾರದರ್ಶನಾತ್ ಊರ್ಧ್ವಪುಂಡ್ರಂ ಗೋಪೀಚಂದನೇನೈವ ಧಾರ್ಯಮ್ ।

ಬ್ರಹ್ಮಾದಿದೇವತೆಗಳು ಕೂಡಾ ಗೋಪೀಚಂದನದಿಂದಲೇ ಊರ್ಧ್ವ-ಪುಂಡ್ರವನ್ನು ಧರಿಸುವ ಸದಾಚಾರದಲ್ಲಿ ಪರಿನಿಷ್ಠಿತರಾಗಿದ್ದಾರೆ. ಆದ್ದರಿಂದ ಗೋಪೀಚಂದನದಿಂದಲೇ ಊರ್ಧ್ವಪುಂಡ್ರವನ್ನು ಧರಿಸುವುದು ಶ್ರೇಷ್ಠವಾಗಿದೆ.

ಬ್ರಾಹ್ಮಣರು ಗೋಪೀಚಂದನ ಧರಿಸುವುದು ಅತ್ಯುತ್ತಮವಾಗಿದೆ. ಇದನ್ನು ಪದ್ಮಪುರಾಣವು ಈ ರೀತಿಯಾಗಿ ತಿಳಿಸುತ್ತದೆ-

ಬ್ರಾಹ್ಮಣಾನಾಂ ತು ಸರ್ವೇಷಾಂ ವೈದಿಕಾನಾಮನುತ್ತಮಮ್ ।
ಗೋಪೀಚಂದನವಾರಿಭ್ಯಾಮೂರ್ಧ್ವಪುಂಡ್ರಂ ವಿಧೀಯತೇ ॥ ಪ.ಪು

ವೈದಿಕರಾದ ಬ್ರಾಹ್ಮಣರೆಲ್ಲರೂ ಗೋಪೀಚಂದನ ಮತ್ತು ಜಲದಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಇದು ಉತ್ತಮವಾದ ವಿಧಾನವಾಗಿದೆ.

**೧೬. ಗೋಪೀಚಂದನ ಎಂಬ ನಾಮವೇತಕೆ ?**

ಗೋಪೀಚಂದನ ಎಂಬ ನಾಮ ಇದಕ್ಕೆ ಹೇಗೆ ಬಂತು ಎಂಬ ಇತಿಹಾಸವನ್ನು ವಾಸುದೇವೋಪನಿಷತ್ ಬಹು ಸುಂದರವಾಗಿ ತಿಳಿಸುತ್ತದೆ. ಈ ಉಪನಿಷತ್ತನ್ನು ಕೃಷ್ಣಾಮೃತಮಹಾರ್ಣವವ್ಯಾಖ್ಯಾನಕಾರರು ಉದಾಹರಿಸಿದ್ದಾರೆ-

ಓಂ ನಮಸ್ಕೃತ್ಯ ಭಗವಾನ್ನಾರದಃ ಸರ್ವೇಶ್ವರಂ ವಾಸುದೇವಂ ಪಪ್ರಚ್ಛ। ಅಧೀಹಿ ಭಗವನ್ ಊರ್ಧ್ವಪುಂಡ್ರವಿಧಿಂ ದ್ರವ್ಯಮಂತ್ರಸ್ಥಾನಾದಿಸಹಿತಂ ಮೇ ಬ್ರೂಹೀತಿ ।

ತಂ ಹೋವಾಚ ಭಗವಾನ್ವಾಸುದೇವೋ ವೈಕುಂಠಸ್ಥಾನಾದುತ್ಪನ್ನಂ ಮಮ ಪ್ರೀತಿಕರಂ ಮದ್ಭಕ್ತೈಃ ಬ್ರಹ್ಮಾದಿಭಿಃ ಧಾರಿತಂ ವಿಷ್ಣುಚಂದನಂ ಮಮಾಂಗೇ ಪ್ರತಿದಿನಮಾಲಿಪ್ತಂ ಗೋಪೀಭಿಃ ಪ್ರಕ್ಷಾಲನಾತ್ ಗೋಪೀ-ಚಂದನಮಾಖ್ಯಾತಮ್ ॥

ವೈಕುಂಠಸ್ಥಹ್ರದಾದೇತಚ್ಚಂದನಂ ಸ್ಥಾಪಿತಂ ಮಯಾ ।
ಗೋಪಸ್ತ್ರೀಣಾಂ ಚ ಭೋಗಾರ್ಥಂ ಯದಾಹೃತ್ಯ ಚ ತತ್ಪುನಃ ॥

ಗೋಪೀಭಿಃ ಕ್ಷಾಲಿತಂ ತತ್ರ ಪರ್ವತಾಕಾರತೋಽಪ್ಯಭೂತ್ ।
ಗೋಪೀಚಂದನಮಾಖ್ಯಾತಂ ಶ್ರೀಕೃಷ್ಣಾಧಿಷ್ಠಿತಂ ಚ ತತ್ ॥

ಸರ್ವಕರ್ಮಾಧಿಕಾರಾರ್ಥಂ ಸದಾ ಧಾರ್ಯಂ ಮುಮುಕ್ಷುಭಿಃ ||

ವಾ.ಉ

ನಾರದರು ಸರ್ವೇಶ್ವರನಾದ ವಾಸುದೇವನಿಗೆ ವಿನಯದಿಂದ ನಮಸ್ಕರಿಸಿ ಪ್ರಶ್ನಿಸುತ್ತಿದ್ದಾರೆ. ಸ್ವಾಮಿನ್ ! ಊರ್ಧ್ವಪುಂಡ್ರದ ವಿಧಾನವನ್ನು ಅದಕ್ಕೆ ಉಪಯುಕ್ತವಾದ ದ್ರವ್ಯವನ್ನು, ಮಂತ್ರಗಳನ್ನು, ಧರಿಸಬೇಕಾದ ಸ್ಥಳಗಳನ್ನು ವಿವರವಾಗಿ ನನಗೆ ಉಪದೇಶಿಸಬೇಕು.

ನಾರದರ ಪ್ರಶ್ನೆಗೆ ವಾಸುದೇವ ಈ ರೀತಿಯಾಗಿ ಉತ್ತರಿಸುತ್ತಿದ್ದಾನೆ. ಹೇ ನಾರದ ! ಈ ಚಂದನ ವೈಕುಂಠಲೋಕದಲ್ಲಿ ಉತ್ಪನ್ನವಾದದ್ದು. ನನಗೆ ಪರಮಪ್ರೀತಿಕರವಾದ ಚಂದನವಿದು. ಇದು ವಿಷ್ಣುಚಂದನ. ಹೀಗೆಯೇ ವೈಕುಂಠಲೋಕದಲ್ಲಿ ಇದರ ವ್ಯವಹಾರ. ಈ ವಿಷ್ಣುಚಂದನವನ್ನು ನನ್ನ ಭಕ್ತರಾದ ಬ್ರಹ್ಮಾದಿದೇವತೆಗಳು ನಿತ್ಯವೂ ತಪ್ಪದೇ ಧರಿಸುತ್ತಾರೆ. ವೈಕುಂಠದ ಹ್ರದದಿಂದ ಈ ಚಂದನವನ್ನು ಗೋಪಿಕಾಸ್ತ್ರೀಯರ ಭೋಗಕ್ಕಾಗಿ ದ್ವಾರಕೆಯಲ್ಲಿ ಸ್ಥಾಪಿಸಿದ್ದೇನೆ.

ಈ ಚಂದನವನ್ನು ಗೋಪಿಕಾಸ್ತ್ರೀಯರು ನಿತ್ಯವೂ ನನ್ನ ಅಂಗಗಳಿಗೆ ಲೇಪಿಸುತ್ತಿದ್ದರು. ಮರುದಿನ ಪ್ರಕ್ಷಾಳನ ಮಾಡಿ ಅದನ್ನು ಧರಿಸಲು ಉಪಯೋಗಿಸುತ್ತಿದ್ದರು. ಇದುವೆ ಪರ್ವತಾಕಾರವಾಯಿತು. ಗೋಪಿಕಾ-ಸ್ತ್ರೀಯರಿಂದ ಲೇಪಿತವಾದದ್ದರಿಂದ ಇದು ನಂತರ ಗೋಪೀಚಂದನ-ನಾಮಕವಾಯಿತು. ಈ ಹೆಸರಿನಿಂದಲೇ ಪ್ರಸಿದ್ಧವಾಯಿತು. ಇದು ಶ್ರೀಕೃಷ್ಣನಿಂದ ಅಧಿಷ್ಠಿತವಾಗಿದೆ. ಸಕಲಕರ್ಮಗಳ ಅಧಿಕಾರವನ್ನು ಪಡೆಯುವುದಕ್ಕಾಗಿ ಈ ಗೋಪೀಚಂದನವನ್ನು ಸರ್ವರೂ ತಪ್ಪದೇ ಧರಿಸಬೇಕು. ಇದನ್ನು ಧರಿಸದವರಿಗೆ ಯಾವ ಸತ್ಕರ್ಮದಲ್ಲಿಯೂ ಅಧಿಕಾರವಿರುವುದಿಲ್ಲ.

### ೧೭ ಊರ್ಧ್ವಪುಂಡ್ರಕ್ಕಾಗಿ ವಿಹಿತವಾದ ಮೃತ್ತಿಕೆಗಳು

ಗೋಪೀಚಂದನ ಸಿಗದಿರುವಾಗ ಸ್ಮೃತಿಗಳಲ್ಲಿ ಉಕ್ತವಾದ ಮೃತ್ತಿಕೆಗಳನ್ನು ಸ್ವೀಕರಿಸಬೇಕು. ಆದರೆ ಕಡ್ಡಾಯವಾಗಿ ಆ ಮೃತ್ತಿಕೆಯು ವಿಷ್ಣುಸಂಬಂಧಿಯಾಗಿರಬೇಕು. ಇದನ್ನು ಎಚ್ಚರಿಕೆಯಲ್ಲಿಟ್ಟುಕೊಂಡಿರಬೇಕು. ಈ ವಿಷಯಗಳನ್ನು ತಿಳಿಸುವ ವಚನಗಳು ಈ ರೀತಿಯಾಗಿವೆ-

ಶ್ರೀರಂಗೇ ದ್ವಾರಕಾಯಾಂ ಚ ಶ್ರೀಕೂರ್ಮೇ ಚ ತಥಾ ಸ್ಥಿತಮ್ ।
ಸಿಂಹಾದ್ರೌ ಚ ಪ್ರಯಾಗೇ ಚ ವಾರಾಹೇ ತುಲಸೀವನೇ ॥

ಗೃಹೀತ್ವಾ ಮೃತ್ತಿಕಾಂ ಭಕ್ತ್ಯಾ ಶಾಲಗ್ರಾಮಜಲೈಸ್ಸಹ ।
ತಯೋರ್ಧ್ವಪುಂಡ್ರಂ ಧೃತ್ವಾಂಗೇ ವಿಷ್ಣುಸಾಯುಜ್ಯಮಾಪ್ನುಯಾತ್ ॥

ಶ್ರೀರಂಗದಲ್ಲಿ, ದ್ವಾರಕಾದಲ್ಲಿ, ಶ್ರೀಕೂರ್ಮದಲ್ಲಿ, ಸಿಂಹಾದ್ರಿಯಲ್ಲಿ, ಪ್ರಯಾಗದಲ್ಲಿ, ಶ್ರೀಮುಷ್ಣದಲ್ಲಿ, ತುಲಸೀವನದಲ್ಲಿ ಇರುವ ಮೃತ್ತಿಕೆಯನ್ನು ಊರ್ಧ್ವಪುಂಡ್ರವನ್ನು ಧರಿಸುವುದಕ್ಕಾಗಿ ಸ್ವೀಕರಿಸಬೇಕು. ಶಾಲಗ್ರಾಮದ ತೀರ್ಥದಿಂದ ಮೃತ್ತಿಕೆಯನ್ನು ತೇಯ್ದು ಅದನ್ನು ತನ್ನ ಅಂಗಗಳಲ್ಲಿ ಧರಿಸಬೇಕು. ಅವನು ವಿಷ್ಣುಸಾಯುಜ್ಯವನ್ನು ಅರ್ಥಾತ್ ಮುಕ್ತಿಯನ್ನು ಪಡೆಯುತ್ತಾನೆ.

ಈ ಹಿಂದೆ ತಿಳಿದಂತೆ ಪುಂಡ್ರಧಾರಣೆ ಇದು ಭಕ್ತಿಗೆ ಕಾರಣವಾದದ್ದರಿಂದ ಮುಕ್ತಿಗೆ ಸಹಕಾರಿಯಾಗಿದೆ.

ಪುಂಡ್ರಧಾರಣೆಗೆ ವಿಹಿತವಾದ ಮತ್ತಿಷ್ಟು ದ್ರವ್ಯಗಳನ್ನು ಪದ್ಮಪುರಾಣ ಮತ್ತು ಬ್ರಹ್ಮಾಂಡಪುರಾಣ ಈ ರೀತಿಯಾಗಿ ತಿಳಿಸುತ್ತವೆ-

ಪರ್ವತಾಗ್ರೇ ನದೀತೀರೇ ಮಮ ಕ್ಷೇತ್ರೇ ವಿಶೇಷತಃ ।
ಸಿಂಧುತೀರೇ ಚ ವಲ್ಮೀಕೇ ತುಲಸೀಮೂಲಮೃತ್ತಿಕಾಃ ॥ ಪ.ಪು
ಮೃದ ಏತಾಸ್ತು ಸಂಪಾದ್ಯಾ ವರ್ಜಯೇದನ್ಯಮೃತ್ತಿಕಾಃ ॥

ಪರ್ವತದ ಮೇಲ್ಭಾಗದಲ್ಲಿಯ, ನದೀತೀರದಲ್ಲಿಯ, ವಿಶೇಷವಾಗಿ ನನ್ನ ಕ್ಷೇತ್ರಗಳಲ್ಲಿಯ, ಸಮುದ್ರತೀರದಲ್ಲಿಯ, ಹುತ್ತದಲ್ಲಿಯ, ತುಲಸೀಮೂಲದಲ್ಲಿಯ ಮೃತ್ತಿಕೆಯನ್ನು ಪುಂಡ್ರಧಾರಣೆಗಾಗಿ ಸ್ವೀಕರಿಸಬೇಕು. ಇದರ ಹೊರತು ಬೇರೆ ಮೃತ್ತಿಕೆಗಳನ್ನು ಸರ್ವಥಾ ಸ್ವೀಕರಿಸಬಾರದು. ಇತರ ಮೃತ್ತಿಕೆಗಳಿಂದ ಪುಂಡ್ರಧಾರಣೆ ಮಾಡುವದು ಸರ್ವಥಾ ಸರಿಯಲ್ಲ.

ಯತ್ರ ದಿವ್ಯಂ ಹರೇಃ ಕ್ಷೇತ್ರಂ ತತ್ರೈವ ಮೃದಮಾಹರೇತ್ ।
ಸೈವ ಶ್ರೇಯೋರ್ಥಿಭಿಃ ಗ್ರಾಹ್ಯಾ ಊರ್ಧ್ವಪುಂಡ್ರಸ್ಯ ಧಾರಣೇ ॥

ಶ್ರೀಹರಿಯ ಕ್ಷೇತ್ರ ಪರಮಪಾವನವಾದದ್ದು. ದೇವತೆಗಳು ಪರಮಾತ್ಮನ ಸೇವೆ ಮಾಡುವುದಕ್ಕಾಗಿ ಸಾಲುಗಟ್ಟಿ ಆ ಕ್ಷೇತ್ರದಲ್ಲಿ ನಿಂತಿರುತ್ತಾರೆ. ಆದ್ದರಿಂದ ಆ ಕ್ಷೇತ್ರ ದಿವ್ಯವಾಗಿರುತ್ತದೆ. ಪರಮಾತ್ಮನ ಸಂಚಾರದಿಂದ ಆ ಕ್ಷೇತ್ರವೆಲ್ಲ ಪಾವನವಾಗಿ-ರುತ್ತದೆ. ಅಲ್ಲಿಯ ಮಣ್ಣು ಪರಮಾತ್ಮನ ಪಾದಗಳ ಸಂಪರ್ಕದಿಂದ ಪುನೀತವಾಗಿ-ರುತ್ತದೆ. ಇಂತಹ ಮೃತ್ತಿಕೆ ಮನುಷ್ಯನ ಸಾಧನೆಗೆ ಸಹಕಾರಿಯಾಗುತ್ತದೆ. ಆದ್ದರಿಂದ ದೈವಿಕವಾದ ಆ ಕ್ಷೇತ್ರದಲ್ಲಿಯ ಮೃತ್ತಿಕೆಯನ್ನೇ ಪುಂಡ್ರಧಾರಣೆಗೆ ಸ್ವೀಕರಿಸಬೇಕು. ಇದೇ ಮೃತ್ತಿಕೆ ಮನುಷ್ಯನ ಶ್ರೇಯಸ್ಸಿಗೆ ಕಾರಣವಾಗುತ್ತದೆ.

ಜಾಹ್ನವೀತೀರಸಂಭೂತಾಂ ಮೃದಂ ಮೂರ್ಧ್ನಾ ಬಿಭರ್ತಿ ಯಃ ।
ಬಿಭರ್ತಿ ರೂಪಂ ಸೋಽರ್ಕಸ್ಯ ತಮೋನಾಶಾಯ ಕೇವಲಮ್ ॥

ಬ್ರ.ಪು

ನದೀತೀರದಲ್ಲಿಯ ಮೃತ್ತಿಕೆಗಳಲ್ಲೆಲ್ಲ ಮಹತ್ತ್ವವಾದದ್ದು ಗಂಗಾತೀರದ ಮೃತ್ತಿಕೆ. ಈ ಮೃತ್ತಿಕೆಯನ್ನು ಭಕ್ತಿಯಿಂದ ಯಾರು ಶಿರಸಾ ಧರಿಸುತ್ತಾರೋ ಅವನ ಅಜ್ಞಾನ ನಶಿಸುತ್ತದೆ. ಅವನು ಜ್ಞಾನಸ್ವರೂಪನಾಗುತ್ತಾನೆ. ಹೀಗೆ ಅಂತಃಕರಣಶುದ್ಧಿದ್ವಾರಾ ಜ್ಞಾನಸಂಪಾದನೆಗೆ ಅರ್ಹತೆಯನ್ನು ತಂದು ಕೊಡುತ್ತದೆ ಈ ಪುಂಡ್ರಧಾರಣೆ.

... ... ... ... ... ... .. ಬಿಲ್ವಮೂಲೇಽಪಿ ವಾ ದ್ವಿಜಃ ।
ಭಕ್ತ್ಯಾ ವೈ ಮೃದಮಾದಾಯ ಬಿಭೃಯಾತ್ಪುಂಡ್ರಮುತ್ತಮಮ್ ॥

ಆತ್ರೇ.ಸ್ಮೃ

ಬಿಲ್ವವೃಕ್ಷದ ಮೂಲದಲ್ಲಿರುವ ಮೃತ್ತಿಕೆಯನ್ನು ಕೂಡಾ ಊರ್ಧ್ವಪುಂಡ್ರ-ವನ್ನು ಧರಿಸುವುದಕ್ಕಾಗಿ ಸ್ವೀಕರಿಸಬೇಕೆಂದು ಆತ್ರೇಯಸ್ಮೃತಿ ತಿಳಿಸುತ್ತದೆ.

### ೧೮. ತುಲಸೀಮೃತ್ತಿಕೆಯ ಪ್ರಾಶಸ್ತ್ಯ

ಗೋಪೀಚಂದನಾಭಾವೇ ತುಲಸೀಮೂಲಮೃತ್ತಿಕಾಮ್ ।
ಮುಮುಕ್ಷುರ್ಧಾರಯೇನ್ನಿತ್ಯಮಪರೋಕ್ಷಸ್ಯ ಸಿದ್ಧಯೇ ॥ ಪ.ಪು

ಮುಮುಕ್ಷುವಾದವನು ಗೋಪೀಚಂದನವಿಲ್ಲದಿರುವಾಗ ತುಲಸಿಯ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಇದರಿಂದ ಅಂತಃಕರಣ ಶುದ್ಧವಾಗಿ ಅಪರೋಕ್ಷಜ್ಞಾನಕ್ಕೆ ಸಹಕಾರಿಯಾಗುತ್ತದೆ.

## ೧೯. ಯಾವ ವರ್ಣದ ಮೃತ್ತಿಕೆ ಯೋಗ್ಯ

ಪುಂಡ್ರಧಾರಣೆಗೆ ಮೃತ್ತಿಕೆ ಆವಶ್ಯಕ. ಆ ಮೃತ್ತಿಕೆ ವಿಷ್ಣುಕ್ಷೇತ್ರದ್ದೇ ಆಗಿರಬೇಕು. ಆ ಮಣ್ಣಿನಲ್ಲಿ ಭಗವಂತ ನಡೆದಾಡಿರುತ್ತಾನೆ. ಅವನ ಪಾದದ ಸಂಪರ್ಕದಿಂದ ಪರಮಪವಿತ್ರವಾಗಿರುತ್ತದೆ. ಆ ಮೃತ್ತಿಕೆಯ ಧಾರಣೆ ಮನುಷ್ಯನನ್ನು ಪುನೀತ-ಗೊಳಿಸುತ್ತದೆ. ಆ ಮೃತ್ತಿಕೆಯ ವರ್ಣವನ್ನು, ವರ್ಣಕ್ಕೆ ಅನುಗುಣವಾದ ಫಲವನ್ನು ಸ್ಮೃತಿಗಳು ಈ ರೀತಿಯಾಗಿ ತಿಳಿಸುತ್ತವೆ-

ಶ್ಯಾಮಂ ಶಾಂತಿಕರಂ ಪ್ರೋಕ್ತಂ ರಕ್ತಂ ವಶ್ಯಕರಂ ತಥಾ ।
ಶ್ರೀಕರಂ ಪೀತಮಿತ್ಯಾಹುರ್ವೈಷ್ಣವಂ ಶ್ವೇತಮುಚ್ಯತೇ ॥ ವೀ.ಮಿ

ವೀರಮಿತ್ರೋದಯದಲ್ಲಿ ಉದಾಹೃತವಾದ ಸ್ಮೃತಿಯ ವಚನ ಈ ರೀತಿಯಾಗಿ ತಿಳಿಸುತ್ತದೆ. ಕಪ್ಪು ಬಣ್ಣದ ಮೃತ್ತಿಕೆಯ ಧಾರಣೆಯಿಂದ ಶಾಂತಿಯನ್ನು ಪಡೆಯುತ್ತಾನೆ. ಕೆಂಪು ಬಣ್ಣದ ಮೃತ್ತಿಕೆಯಿಂದ ಪುಂಡ್ರವನ್ನು ಧರಿಸಿದರೆ ಎಲ್ಲರೂ ತನ್ನ ವಶರಾಗುತ್ತಾರೆ. ಹಳದಿಬಣ್ಣದ ಮೃತ್ತಿಕೆ ಸಂಪತ್ಕರವಾಗಿದೆ. ಬಿಳಿಬಣ್ಣದ ಮೃತ್ತಿಕೆ ವಿಷ್ಣುಭಕ್ತಿಪ್ರದವಾಗಿದೆ. ಆದ್ದರಿಂದ ಎಲ್ಲ ಮೃತ್ತಿಕೆಗಳಲ್ಲಿ ಗೋಪೀಚಂದನವು ಪ್ರಶಸ್ತವಾಗಿದೆ ಎಂಬುದನ್ನು ಗಮನಿಸಬೇಕು.

ಅಗ್ನಿಪುರಾಣ ಶ್ವೇತಮೃತ್ತಿಕೆಯ ಫಲವನ್ನು ಸ್ಪಷ್ಟವಾಗಿ ಈ ರೀತಿಯಾಗಿ ತಿಳಿಸುತ್ತದೆ.

... ... .. ... .. ... ... ... .. ಶ್ವೇತಾ ಮೋಕ್ಷಪ್ರದಾ ಶುಭಾ ।
ಶ್ವೇತೇತರಾ ತು ಸಂತ್ಯಾಜ್ಯಾ ಮೃತ್ತಿಕಾ ಹಿ ಮುಮುಕ್ಷುಭಿಃ ॥ ಅ.ಪು

ಶ್ವೇತಮೃತ್ತಿಕೆ ಇದು ಶುಭವಾಗಿದೆ. ಮುಕ್ತಿಪ್ರದವಾಗಿದೆ. ಆದ್ದರಿಂದ ಮುಮುಕ್ಷುಗಳಾದವರು ಪ್ರಯತ್ನಪೂರ್ವಕವಾಗಿ ಶ್ವೇತಮೃತ್ತಿಕೆಯನ್ನೇ ಪುಂಡ್ರಧಾರಣೆಗೆ ಸ್ವೀಕರಿಸಬೇಕು. ಶ್ವೇತೇತರವಾದ ಮೃತ್ತಿಕೆಯನ್ನು ಪ್ರಯತ್ನಪೂರ್ವಕವಾಗಿ ಪರಿತ್ಯಜಿಸಬೇಕು. ಈ ಶ್ವೇತಮೃತ್ತಿಕೆಯೇ ಗೋಪಿಚಂದನ. ಗೋಪೀಚಂದನ ಸಿಗದಿರುವಾಗ ವಿಷ್ಣುಕ್ಷೇತ್ರದಲ್ಲಿಯ ಅಥವಾ ಪೂರ್ವೋಕ್ತವಾದ ಮೃತ್ತಿಕೆಗಳನ್ನು ಸ್ವೀಕರಿಸಬೇಕು. ಪುಂಡ್ರಗಳನ್ನು ಧರಿಸದೇ ಸರ್ವಥಾ ಇರಬಾರದು.

**೨೦. ಚತುರ್ವಿಧವಾದ ಪುಂಡ್ರಧಾರಣೆ**

ಪುಂಡ್ರಧಾರಣೆಗೆ ಪ್ರತಿನಿತ್ಯ ನಾಲ್ಕುವಿಧವಾದ ದ್ರವ್ಯಗಳನ್ನು ಆಯಾ ಕಾಲಕ್ಕೆ ಅನುಗುಣವಾಗಿ ಉಪಯೋಗಿಸುತ್ತಿರಬೇಕು. ಇದರ ವಿಚಾರವನ್ನು ಈ ಸ್ಮೃತಿಯು ತಿಳಿಸುತ್ತದೆ.

ಚಂದನಂ ಭಸ್ಮ ಮೃದ್ವಾಪಿ ತೋಯಂ ಚೈವ ಚತುರ್ಥಕಮ್ ।
ಏಭಿಃ ದ್ರವ್ಯೈಃ ಯಥಾಕಾಲಮೂರ್ಧ್ವಪುಂಡ್ರಂ ಸಮಾಚರೇತ್ ॥

ಗಂಧ, ಭಸ್ಮ ಮೃತ್ತಿಕೆ ಮತ್ತು ನೀರು ಇಷ್ಟು ಪದಾರ್ಥಗಳಿಂದ ಆಯಾ ಕಾಲಕ್ಕೆ ತಕ್ಕಂತೆ ಪುಂಡ್ರವನ್ನು ಧರಿಸುತ್ತಿರಬೇಕು. ಒಟ್ಟಾರೆ ಯಾವಾಗಲೂ ಪುಂಡ್ರಸಹಿತನಾಗಿಯೇ ಮನುಷ್ಯ ಇರಬೇಕು. ಪುಂಡ್ರರಹಿತನಾಗಿ ಕ್ಷಣಕಾಲವೂ ಇರಬಾರದು. ಈ ಕಾರಣಕ್ಕಾಗಿ ನಾಲ್ಕುವಿಧವಾದ ದ್ರವ್ಯಗಳನ್ನು ಸ್ಮೃತಿಯು ಹೇಳುತ್ತದೆ.

**೨೧. ಯಾವ ಕಾಲದಲ್ಲಿ ಯಾವ ದ್ರವ್ಯದಿಂದ ?**

ಕಾಲಕ್ಕೆ ತಕ್ಕಂತೆ ಪುಂಡ್ರವನ್ನು ಧರಿಸಬೇಕೆಂದು ತಿಳಿಸುವ ಸ್ಮೃತಿಯೇ ಯಾವ ಯಾವ ಕಾಲದಲ್ಲಿ ಯಾವ ದ್ರವ್ಯದಿಂದ ಪುಂಡ್ರವನ್ನು ಧರಿಸಬೇಕೆಂದು ತಿಳಿಸುತ್ತದೆ. ಆ ವಚನಗಳನ್ನು ಗಮನಿಸಬೇಕು-

ಸ್ನಾನಮಧ್ಯೇ ತು ತೋಯೇನ ಸ್ನಾತ್ವಾ ಪುಂಡ್ರಂ ಮೃದಾ ಭವೇತ್ ।
ದೇವಾನಭ್ಯರ್ಚ್ಯ ಗಂಧೇನ ಹುತ್ವಾ ಚೈವ ತು ಭಸ್ಮನಾ ॥ ದಿ.ಮೀ

... ... ... ... ... ... ... ಜಲೇನೈವ ಜಲೇ ಭವೇತ್ ।
ಜಲಾವಗಾಹನಾದೂರ್ಧ್ವಂ ಯಾವದ್ವಸ್ತ್ರಸ್ಯ ಧಾರಣಮ್ ॥

ಸ್ನಾನವನ್ನು ಮಾಡುವಾಗ ಜಲಾಶಯದ ಮಧ್ಯದಲ್ಲಿ ಜಲದಿಂದಲೇ ಪುಂಡ್ರವನ್ನು ಧರಿಸಬೇಕು. ಸ್ನಾನಕಾಲದಲ್ಲಿ ಮತ್ತು ಸ್ನಾನವಾದಮೇಲೆ ವಸ್ತ್ರವನ್ನು ಧರಿಸುವವರೆಗೆ ಮಾಡಬೇಕಾದ ಕರ್ಮಗಳಿಗೆ ಈ ಪುಂಡ್ರವು ಸಾಫಲ್ಯವನ್ನು ತಂದುಕೊಡುತ್ತದೆ.

ಸ್ನಾನ ಮಾಡಿದ ಮೇಲೆ ಮೃತ್ತಿಕೆಯಿಂದ ಅರ್ಥಾತ್ ಗೋಪೀಚಂದನದಿಂದ ಪುಂಡ್ರವನ್ನು ಧರಿಸಬೇಕು. ಭಗವಂತನ ಮತ್ತು ಪರಿವಾರದೇವತೆಗಳ ಪೂಜೆಯಾದ ನಂತರ ಗಂಧದಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ವೈಶ್ವದೇವ ಮೊದಲಾದ ಹೋಮವಾದ ಮೇಲೆ ಭಸ್ಮದಿಂದ ಪುಂಡ್ರವನ್ನು ಧರಿಸಬೇಕು. ಇಷ್ಟು ಪದಾರ್ಥಗಳಿಂದ ಪುಂಡ್ರವನ್ನು ಧರಿಸಿ, ಆಯಾ ಕಾಲದಲ್ಲಿ ಉಕ್ತವಾದ ಕರ್ಮಗಳನ್ನು ಆಚರಿಸಬೇಕು. ಹೀಗೆ ಮಾಡುವುದರಿಂದ ತಾನು ಆಚರಿಸಿದ ಕರ್ಮಗಳು ಸಫಲವಾಗುತ್ತವೆ.

ಒಟ್ಟಾರೆ ಪ್ರಮಾಣವಚನಗಳಿಂದ ಮತ್ತು ತತ್ತ್ವಜ್ಞಾನಿಗಳ ಸಂಪ್ರದಾಯದಿಂದ ಬಂದಿರುವ ಪುಂಡ್ರಧಾರಣೆಯ ವಿಚಾರವನ್ನು ತಿಳಿಯಬೇಕಾದರೆ-

ಪ್ರಾತಃಕಾಲದಲ್ಲಿ ಎದ್ದ ಮೇಲೆ ತುಲಸೀಮೂಲಮೃತ್ತಿಕೆಯಿಂದ, ಸ್ನಾನ ಮಾಡುವಾಗ ಜಲದಿಂದ, ಸ್ನಾನವಾದಮೇಲೆ ಗೋಪೀಚಂದನದಿಂದ, ವೈಶ್ವದೇವಾದಿ ಹೋಮ ಮುಗಿದ ಮೇಲೆ ಭಸ್ಮದಿಂದ, ದೇವರ ಪೂಜೆಯಲ್ಲಿ ದೇವರಿಗೆ ಸಮರ್ಪಿಸಿದ ಗಂಧದಿಂದ, ಆ ಗಂಧದ ಮೇಲೆ ಅಂಗಾರದಿಂದ ಪುಂಡ್ರವನ್ನು ಲೇಪಿಸಿಕೊಳ್ಳಬೇಕು. ಹಣೆಯಲ್ಲಿ ಧರಿಸಿದ ಅಂಗಾರದ ಕೆಳಗೆ ವೃತ್ತಾಕಾರದಲ್ಲಿ ಅಕ್ಷತೆಯನ್ನು ಧರಿಸಬೇಕು. ಈ ಅಂಗಾರ-ಅಕ್ಷತೆ ಗದೆಯ ಆಕಾರದಲ್ಲಿ ಕಂಗೊಳಿಸುತ್ತಿರಬೇಕು.

ನರಹರಿತೀರ್ಥರಿಂದ ಪ್ರವೃತ್ತವಾದ ಯಕ್ಷಗಾನದಲ್ಲಿ ಇಂದಿಗೂ ಗದೆಯ ಆಕಾರದಲ್ಲಿ ಅಂಗಾರ-ಅಕ್ಷತೆಯನ್ನು ಧರಿಸುವ ಸಂಪ್ರದಾಯ ಉಳಿದುಕೊಂಡು ಬಂದಿದೆ. ಈ ವಿಷಯದಲ್ಲಿ ಸಂದೇಹವನ್ನು ಸರ್ವಥಾ ತಾಳಬಾರದು.

ಸ್ಮೃತಿಗಳಂತೆ ಹಿರಿಯರ ಸಂಪ್ರದಾಯವೂ ಪ್ರಮಾಣವೆಂದು ಶ್ರೀಮದಾಚಾರ್ಯರು ''ಆಚಾರಶ್ಚೈವ ಸಾಧೂನಾಮ್'' ಎಂಬ ವಚನದಿಂದ ತಿಳಿಸಿರುತ್ತಾರೆ. ಈ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳಬೇಕು.

**೨೨. ಅಕ್ಷತೆಯ ಧಾರಣೆಗೆ ಉಲ್ಲೇಖ**

ಅಕ್ಷತೆಯನ್ನು ಧರಿಸುವ ಸಂಪ್ರದಾಯವಿದು ಅರ್ವಾಚೀನವಲ್ಲ, ಕಿಂತು ಪ್ರಾಚೀನವೇ ಆಗಿದೆ. ಆದ್ದರಿಂದ ಅವಶ್ಯವಾಗಿ ಅದನ್ನು ಧರಿಸಲೇಬೇಕು. ಈ ವಿಷಯದಲ್ಲಿ ಸರ್ವಥಾ ಸಂದೇಹ ಸಲ್ಲದು.

ಭಲಾರೀ ನರಸಿಂಹಾಚಾರ್ಯರು ರಚಿಸಿದ ಸ್ಮೃತ್ಯರ್ಥಸಾಗರದಲ್ಲಿಯ ಅವರ ಈ ಮುಂದಿನ ವಚನಗಳಿಂದ ಅಕ್ಷತೆಯ ಧಾರಣೆ ಆವಾಗಿನ ಕಾಲದಲ್ಲಿಯೂ ಇತ್ತು ಎಂಬುದು ಸ್ಪಷ್ಟವಾಗುತ್ತದೆ.

ಪರಿವೇಷಣಾನಂತರಂ ಗಂಧಾಕ್ಷತತೀರ್ಥಾದಿಭಿಃ ಪೂಜಿತಾನಾಮತಿಥ್ಯಾದೀನಾಂ ಅನ್ನದಾನಂ ಕೃತ್ವಾ "ಏಕೋ ವಿಷ್ಣುಃ" ಇತಿ ವಿಷ್ಣೌ ಸಮರ್ಪ್ಯ । ಸ್ವಯಂ ಗಂಧಾಕ್ಷತಾದಿಭಿರಲಂಕೃತ್ಯ ।

ಬಂದ ಅತಿಥಿಗಳಿಗೆ ಭೋಜನಕ್ಕೆ ಬಡಿಸಿದನಂತರ ಗಂಧ-ಅಕ್ಷತೆ-ತೀರ್ಥಗಳನ್ನು ಅವರಿಗೆ ನೀಡಬೇಕು. ಇದು ಅವರಿಗೆ ಮಾಡುವ ಉಪಚಾರವೆಂದೆನಿಸುತ್ತದೆ. ಅವರಿಗೆ ಗಂಧ-ಅಕ್ಷತೆ-ತೀರ್ಥಗಳನ್ನು ನೀಡದಿದ್ದರೆ ಇದು ಅವರಿಗೆ-ಅವರ ಅಂತರ್ಯಾಮಿಯಾದ ಪರಮಾತ್ಮನಿಗೆ ಮಾಡಿದ ಅಪಚಾರವೆಂದಾಗುತ್ತದೆ ಎಂದು ಸೂಕ್ಷ್ಮವಾಗಿ ಭಲಾರಿ ಆಚಾರ್ಯರು ಎಚ್ಚರಿಸುತ್ತಾರೆ. ನಂತರ ಅವರನ್ನು ಭೋಜನಕ್ಕೆ ಕುಳ್ಳರಿಸಿ ತಾನು ಕೂಡಾ ಗಂಧವನ್ನು ಅಕ್ಷತೆಯನ್ನು ಧರಿಸಿ ತೀರ್ಥವನ್ನು ಸ್ವೀಕರಿಸಬೇಕೆಂದು ತಿಳಿಸುತ್ತಾರೆ.

ಈ ಸಂಪ್ರದಾಯ ಶ್ರೀಮದಾಚಾರ್ಯರ ಕಾಲದಿಂದಲೂ ಇತ್ತೆಂಬುದು ನಾರಾಯಣಪಂಡಿತಾಚಾರ್ಯರ ಭಾವಪ್ರಕಾಶಿಕಾದ ಈ ವಚನದಿಂದ ಸ್ಪಷ್ಟವಾಗುತ್ತದೆ.

ಕಿಂ ಲಲಾಟೇ ಇತಿ ಪೃಷ್ಟೋ ರಾಜ್ಞಾ ಕರೇಣ ಗದಾಂ ಭವಂತೋ ಬಿಭ್ರಂತಿ[1] ವಯಂ ಲಲಾಟೇ ಇತ್ಯೂಚೇ ಇತ್ಯಾದ್ಯಶಬ್ದಾರ್ಥಃ ॥ ಮ.ವಿ

ಶ್ರೀಮದಾಚಾರ್ಯರು ತುರುಷ್ಕರಾಜ ಕೇಳಿದ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದಾರೆ. ಆ ಸಂದರ್ಭದಲ್ಲಿ ಹೇಳಿದ ಮಾತಿದೆಂದು ತಮ್ಮ ವ್ಯಾಖ್ಯಾನವಾದ ಭಾವಪ್ರಕಾಶಿಕೆಯಲ್ಲಿ ಉದಾಹರಿಸುತ್ತಾರೆ. ಈ ಪ್ರಸಂಗದಲ್ಲಿಯ ಮಧ್ವವಿಜಯದ ಮುಲ ಶ್ಲೋಕವಿದಾಗಿದೆ-

1. ಇಲ್ಲಿ ಬಿಭ್ರಂತಿ ಎಂದು ಪಾಣಿನಿಯ ವ್ಯಾಕರಣದ ಪ್ರಕಾರ ಶುದ್ಧವಾದ ಪಾಠವಲ್ಲ. ಆದರೆ ಇದೇ ರೀತಿಯಾಗಿ ಮುದ್ರಿತವಾದ ಪ್ರತಿಗಳಲ್ಲಿ ಕಾಣುತ್ತೇವೆ. ಇದು ಲೇಖಕರ ಪ್ರಮಾದವಾಗಿರಬಹುದು. ಈ ಸ್ಥಳದಲ್ಲಿ ಬಿಭ್ರತಿ ಎಂದು ಇರಬೇಕು.

ಯೋಽಸೌ ದೇವೋ ವಿಶ್ವದೀಪಃ ಪ್ರದೀಪ್ತಃ
ಕುರ್ಮಃ ಸರ್ವಂ ತತ್ಪರಾನುಗ್ರಹೇಣ ।
ಯಾಮಸ್ತಾವತ್ ತೂರ್ಣಮಾಶಾಮುದೀಚೀಮ್
ಇತ್ಯಾದ್ಯಂ ತದ್ಭಾಷಯಾ ಚಿತ್ರವಾಕ್ಯಮ್ ॥

ರಾಜನು ಕೇಳಿದ ಒಂದು ಪ್ರಶ್ನೆಗೆ ಶ್ರೀಮದಾಚಾರ್ಯರು ಉತ್ತರಿಸಿದ್ದಾರೆ. ಮತ್ತೊಂದು ಪ್ರಶ್ನೆಯನ್ನು ರಾಜ ಕೇಳುತ್ತಾನೆ.

ಪ್ರ. ನೀವು ಲಲಾಟದಲ್ಲಿ ಧರಿಸಿದ್ದು ಏನು ?

ಉ. ನೀವು ಕೈಯಲ್ಲಿ ಗದೆಯನ್ನು ಧರಿಸುತ್ತೀರಿ. ನಾವು ಆ ಗದೆಯನ್ನು ಲಲಾಟದಲ್ಲಿ ಧರಿಸುತ್ತೇವೆ.

ಈ ವಿಷಯವನ್ನು ''ಇತ್ಯಾದ್ಯಂ'' ಎಂಬ ಮೂಲದಿಂದ ಗ್ರಹಿಸಿಕೊಳ್ಳಬೇಕೆಂದು ನಾರಾಯಣಪಂಡಿತಾಚಾರ್ಯರು ತಿಳಿಸುತ್ತಾರೆ.

ಈ ವಚನದಿಂದ ಅಂಗಾರ ಹಾಗು ಅಕ್ಷತೆಯನ್ನು ಧರಿಸುವುದು ಶ್ರೀಮದಾಚಾರ್ಯರ ಕಾಲದಿಂದ ಬಂದಿರುತ್ತದೆಂಬುದು ಸ್ಪಷ್ಟವಾಗುತ್ತದೆ.

**೨೩. ಭಸ್ಮಧಾರಣೆ ವಿಹಿತವೋ ?**

ಭಸ್ಮದಿಂದ ಪುಂಡ್ರವನ್ನು ಧರಿಸುವುದು ನಿಷಿದ್ಧವೆಂದು ಹಲವರು ಹೇಳುತ್ತಾರೆ. ಆದರೆ ಆ ವಿಷಯದಲ್ಲಿ ಪ್ರಮಾಣಗಳನ್ನು ನಾವು ಚಿಂತಿಸಬೇಕಾಗಿದೆ. ಭಸ್ಮವನ್ನು ಧರಿಸಬೇಕೆಂದು ತಿಳಿಸುವ ಪ್ರಮಾಣಗಳು ಹೇರಳವಾಗಿ ದೊರೆಯುತ್ತವೆ. ಈಗಾಗಲೇ ''ಹುತ್ವಾ ಚೈವ ತು ಭಸ್ಮನಾ'' ''ಚಂದನಂ ಭಸ್ಮ ವೃದ್ವಾಪಿ'' ಎಂಬ ಪ್ರಮಾಣಗಳನ್ನು ನಾವು ಕಂಡಿದ್ದೇವೆ. ಈ ಪ್ರಮಾಣವನ್ನು ನಾರಾಯಣಾ-ಚಾರ್ಯರು ತಮ್ಮ ''ದಿನತ್ರಯಮೀಮಾಂಸಾ''ದಲ್ಲಿ ಉದಾಹರಿಸಿದ್ದಾರೆ.

ಇದಲ್ಲದೆ ಲಘ್ವಾಶ್ವಲಾಯನಸ್ಮೃತಿಯು ಭಸ್ಮ ಧರಿಸುವಾಗಿನ ಕ್ರಮವನ್ನು ತಿಳಿಸುತ್ತದೆ. ಆ ವಚನವನ್ನು ಗಮನಿಸಿ-

ಪ್ರಾತಸ್ಸಾಯಂ ಜಪೇನ್ಮಂತ್ರಮೋಂ ಚ ಮೇ ಸ್ವರ ಇತ್ಯಥ ।
ಅಭಿವಾದ್ಯ ಜಪೇದ್ದೇವೀಂ ವಿಭೂತಿಂ ಚೈವ ಧಾರಯೇತ್ ॥
ವಿಭೂತಿಧಾರಣೇ ಮಾನಸ್ತೋಕೇಯಂ ಮಂತ್ರ ಉಚ್ಯತೇ ॥ಲ.ಆ.ಸ್ಮೃ

ಪ್ರಾತಃಕಾಲದಲ್ಲಿ ಸಾಯಂಕಾಲದಲ್ಲಿ ಅಗ್ನಿಕಾರ್ಯ-ವೈಶ್ವದೇವ ಮೊದಲಾದ ಹೋಮಗಳನ್ನು ಮಾಡುವಾಗ ''ಓಂ ಚ ಮೇ'' ಎಂಬ ಮಂತ್ರವನ್ನು ಪಠಿಸಿ ಅಗ್ನಿಗೆ ತದಂತರ್ಯಾಮಿಯಾದ ಪರಮಾತ್ಮನಿಗೆ ನಮಿಸಬೇಕು. ನಂತರ ವಿಭೂತಿಯನ್ನು ಅರ್ಥಾತ್ ಭಸ್ಮವನ್ನು ಧರಿಸಬೇಕು. ಭಸ್ಮವನ್ನು ಧರಿಸುವಾಗ ''ಮಾ ನಸ್ತೋಕೇ'' ಎಂಬ ಮಂತ್ರವನ್ನು ಪಠಿಸಬೇಕು.

ಭಸ್ಮವನ್ನು ಧರಿಸುವುದಕ್ಕಾಗಿಯೇ ವೇದದಲ್ಲಿ ಒಂದು ಮಂತ್ರ ಸೀಮಿತವಾಗಿದೆ. ಹೀಗಾಗಿ ಭಸ್ಮವನ್ನು ಧರಿಸುವುದು ವೇದವಿಹಿತವೂ ಆಗಿದೆ. ಸ್ಮೃತಿವಿಹಿತವೂ ಆಗಿದೆ. ಇದಲ್ಲದೇ ಶಿಷ್ಟಸಂಪ್ರದಾಯವೂ ಇದೆ. ಆದ್ದರಿಂದ ಭಸ್ಮವನ್ನು ಹಣೆಯಲ್ಲಿ, ಕಂಠದಲ್ಲಿ, ನಾಭಿಯಲ್ಲಿ, ಬಲಭುಜದಲ್ಲಿ, ಎಡಭುಜದಲ್ಲಿ, ತಲೆಯ ಮೇಲೆ ಧರಿಸಬೇಕು. ಹೀಗೆ ಧರಿಸುವದು ಕಡ್ಡಾಯವಾಗಿದೆ.

ಸತ್ಸಂಪ್ರದಾಯವೇ ಒಂದು ಪ್ರಬಲವಾದ ಪ್ರಮಾಣ. ಇಂತಹ ಸಾಂಪ್ರದಾಯಿಕವಾದ ಆಚಾರವನ್ನು ಪ್ರಮಾಣಬಾಹಿರವೆಂದು ತಿರಸ್ಕರಿಸಬಾರದು. ಸಂಪ್ರದಾಯ ಮತ್ತು ಪ್ರಮಾಣ ಎರಡೂ ಇದ್ದಾಗ ಇಂತಹ ಆಚಾರವನ್ನು ಅವಶ್ಯವಾಗಿ ಪಾಲಿಸಬೇಕು. ಈ ವಿಷಯದಲ್ಲಿಯ ವಿರುದ್ಧವಾದ ಪ್ರಮಾಣಗಳನ್ನು ಉದಾಸೀನಮಾಡಬೇಕು.

ಇನ್ನು ಭಸ್ಮವನ್ನು ಧರಿಸಬಾರದೆಂದು ಹೇಳುವ ಪ್ರಮಾಣಗಳು ಭಸ್ಮದಿಂದ ತಿರ್ಯಕ್‌ಪುಂಡ್ರವನ್ನು ವಿಷ್ಣುಭಕ್ತರು ಧರಿಸಬಾರದು ಎಂಬುದನ್ನು ತಿಳಿಸುತ್ತವೆ. ಶೈವರು ಮಾತ್ರ ಭಸ್ಮದಿಂದ ತಿರ್ಯಕ್‌ಪುಂಡ್ರವನ್ನು ಧರಿಸಬೇಕು. ಈ ವಿಷಯದಲ್ಲಿ ಪ್ರಮಾಣಗಳನ್ನು ಈಗಾಗಲೇ ನೀವು ಗಮನಿಸಿದ್ದೀರಿ.

ನಾರಾಯಣಾಚಾರ್ಯರ ದಿನತ್ರಯಮೀಮಾಂಸಾದಲ್ಲಿಯ ಈ ಮಾತನ್ನು ಗಮನಿಸಬೇಕು.

ಕಿಂ ಬಹುನಾ ಭಸ್ಮನಾಪ್ಯೂರ್ಧ್ವಪುಂಡ್ರಧಾರಣಮಿತ್ಯಾದಯೋ ಭೂಯಾಂಸೋ ವೈಷ್ಣವಧರ್ಮಾಃ ಪ್ರಯೋಗಪಾರಿಜಾತಾದಿಗ್ರಂಥೇಷು ದೃಶ್ಯಂತೇ ॥

ಊರ್ಧ್ವಪುಂಡ್ರವನ್ನು ಧರಿಸಲು ಶಾಸ್ತ್ರೋಕ್ತವಾದ ಯಾವುದೇ ದ್ರವ್ಯ ಇಲ್ಲ. ಇಂತಹ ಪ್ರಸಂಗದಲ್ಲಿ ಹೋಮಶಿಷ್ಟವಾದ ಭಸ್ಮದಿಂದಲೇ ಸ್ನಾನವಾದಮೇಲೆ ಊರ್ಧ್ವಪುಂಡ್ರವನ್ನು ಧರಿಸಬೇಕು.

ಊರ್ಧ್ವಪುಂಡ್ರವನ್ನು ಧರಿಸುವುದು ವೈಷ್ಣವಧರ್ಮವಾಗಿದೆ. ಆದ್ದರಿಂದ ಇದು ಪ್ರಧಾನವಾದ ಧರ್ಮವಾಗಿದೆ. ಅದಕ್ಕಾಗಿ ಬೇಕಾದ ದ್ರವ್ಯಗಳಲ್ಲಿ ಮುಖ್ಯವಾದದ್ದು ಶ್ವೇತವರ್ಣದ ಗೋಪೀಚಂದನ. ಇದು ಇಲ್ಲದಿರುವಾಗ ವಿಷ್ಣುಕ್ಷೇತ್ರ ಮೊದಲಾದ ಸ್ಥಳದಲ್ಲಿಯ ಯಾವುದೇ ಬಣ್ಣದ ಮೃತ್ತಿಕೆಯನ್ನು ಉಪಯೋಗಿಸಬಹುದು. ಈ ದ್ರವ್ಯಗಳೂ ಇಲ್ಲದಿರುವಾಗ ಕೇವಲ ಹೋಮಶೇಷವಾದ ಭಸ್ಮದಿಂದ ಊರ್ಧ್ವಪುಂಡ್ರವನ್ನು ಕೂಡಾ ಧರಿಸಬಹುದು. ಹೀಗೆ ಮಾಡುವುದರಿಂದ ಪ್ರಧಾನವಾದ ವೈಷ್ಣವಧರ್ಮವನ್ನು ಪಾಲಿಸಿದಂತಾಗುತ್ತದೆ. ಮಾಡಿದ ಕರ್ಮಗಳೂ ಸಫಲವಾಗುತ್ತವೆ.

### ೨೪. ಪಂಚಪುಂಡ್ರ-ತ್ರಿಪುಂಡ್ರಧಾರಣೆ

ಸದಾಚಾರಸ್ಮೃತಿಯ ಪ್ರಕಾಶಿಕಾವ್ಯಾಖ್ಯಾನಕಾರರು ಮನುಷ್ಯರೆಲ್ಲರೂ ಪಂಚಪುಂಡ್ರ ಅಥವಾ ತ್ರಿಪುಂಡ್ರವನ್ನು ಧರಿಸಬೇಕೆಂದು ತಿಳಿಸುತ್ತಾರೆ. ಅದೇ ವಚನವಿದು-

ಗೋಪೀಚಂದನಪುಂಡ್ರಂ ತು ತುಲಸೀಮೂಲಮೃತ್ತಿಕಾಮ್ ।
ದೇವಪ್ರಸಾದಗಂಧಂ ಚ ದೇವಸ್ಯಾಂಗಾರಧೂಪಕಮ್ ॥

ಹುತಶೇಷಂ ತಥಾ ಭಸ್ಮ ಇತ್ಯೇತತ್ಪಂಚಪುಂಡ್ರಕಮ್ ।
ತ್ರಿಪುಂಡ್ರಂ ಪಂಚಪುಂಡ್ರಂ ವಾ ಧಾರಯೇದ್ ದ್ವಿಜಸತ್ತಮಃ ॥

ಸ್ನಾತ್ವಾ ಮೃದೋರ್ಧ್ವಪುಂಡ್ರಃ ಸ್ಯಾದ್ ಹುತ್ವಾ ಚೈವ ತು ಭಸ್ಮನಾ ।
ದೇವಾನಭ್ಯರ್ಚ್ಯ ಗಂಧಾದ್ಯೈಃ ತ್ರಿಪುಂಡ್ರಂ ಧಾರಯೇದ್ ದ್ವಿಜಃ ॥

ಪ್ರಕಾಶಿಕಾ

ಸ್ನಾನಮಾಡುವುದಕ್ಕೂ ಮೊದಲು ತುಲಸೀಮೃತ್ತಿಕೆಯಿಂದ, ಸ್ನಾನವಾದ ಮೇಲೆ ಗೋಪೀಚಂದನದಿಂದ, ದೇವರ ಪೂಜೆಯ ನಂತರ ಗಂಧದಿಂದ, ಮತ್ತು ಅಂಗಾರದಿಂದ ಮತ್ತು ವೈಶ್ವದೇವಮೊದಲಾದ ಹೋಮ ಮಾಡಿದಮೇಲೆ ಭಸ್ಮದಿಂದ ಹೀಗೆ ಐದು ಪದಾರ್ಥಗಳಿಂದ ಪುಂಡ್ರವನ್ನು ಧರಿಸಿಕೊಳ್ಳಬೇಕು. ಎಂದು ತಿಳಿಸುತ್ತಾರೆ.

ಇಷ್ಟಲ್ಲದೇ ಸ್ನಾನಮಾಡುವಾಗ ಮಧ್ಯದಲ್ಲಿ ಜಲದಿಂದ ಧರಿಸಬೇಕು. ಇದನ್ನು ಈಗಾಗಲೇ ತಿಳಿದಿದ್ದೇವೆ. ಒಟ್ಟಾರೆ ತಿಳಿಯುವುದಾದರೆ ಆರುಪದಾರ್ಥಗಳಿಂದ ಪುಂಡ್ರವನ್ನು ಧರಿಸಬೇಕು.

ಇದಾಗದಿದ್ದರೆ ಮೂರು ಪದಾರ್ಥಗಳಿಂದಾದರೂ ಪುಂಡ್ರವನ್ನು ಧರಿಸಬೇಕೆಂದು ಇದೇ ವ್ಯಾಖ್ಯಾನಕಾರರು ತಿಳಿಸುತ್ತಾರೆ. ಇದನ್ನೇ ತ್ರಿಪುಂಡ್ರವೆಂದು ತಿಳಿಯಬೇಕು.

ಹೀಗಾಗಿ ಎಲ್ಲಿಯೇ ತ್ರಿಪುಂಡ್ರವನ್ನು ಧರಿಸಬೇಕೆಂದು ಹೇಳಿದರೆ ಅದು ಮೂರುಪದಾರ್ಥಗಳಿಂದ ಧರಿಸಬೇಕಾದ ಪುಂಡ್ರವೆಂದೇ ಅರ್ಥ ಹೊರತು ಮೂರು ಅಡ್ಡಗೆರೆ ಎಂದು ತಿಳಿಯಬಾರದು.

**೨೫. ಗಂಧಧಾರಣೆಯಲ್ಲಿ ವಿಶೇಷ**

ಗಂಧವನ್ನು ಧರಿಸುವಾಗ ಒಂದು ನಿಯಮವನ್ನು ವೀರಮಿತ್ರೋದಯದಲ್ಲಿ ತಿಳಿಸುತ್ತಾರೆ. ಆ ನಿಯಮ ಸ್ವಲ್ಪ ವಿಚಿತ್ರವಾಗಿದೆ. ಅದನ್ನು ಗಮನಿಸಿ-

ಸ್ವಹಸ್ತಲಿಖಿತಂ ಸ್ತೋತ್ರಂ ಸ್ವಯಂ ಘೃಷ್ಟಂ ಚ ಚಂದನಮ್ ।
ಸ್ವಯಂ ಚ ಗ್ರಥಿತಾ ಮಾಲಾ ಶಕ್ರಸ್ಯಾಪಿ ಶ್ರಿಯಂ ಹರೇತ್ ॥

ಇತಿ ನಿಷೇಧಃ ಸಃ ಸ್ವಯಂ ಘೃಷ್ಟಸ್ಯಾಪಿ ಪರಮೇಶ್ವರನಿರ್ಮಾಲ್ಯ-ಚಂದನಸ್ಯ ಧಾರಣೇ ನ ಪ್ರವರ್ತತೇ । ತಸ್ಯ ವಿಹಿತತ್ವಾತ್ । ವಿಹಿತೇ ನಿಷೇಧಾಪ್ರವೃತ್ತೇಃ ॥ ವೀ.ಮಿ

ಪ್ರಾಸಂಗಿಕವಾಗಿ ಹಲವು ವಿಧಿಗಳ ಜ್ಞಾನವನ್ನು ಇಲ್ಲಿ ಮಾಡಿಕೊಳ್ಳಬೇಕು.

ತಾನು ಸ್ವಯಂ ರಚಿಸಿರುವ ಸ್ತೋತ್ರದಿಂದ ಭಗವಂತನನ್ನು ಸ್ತುತಿಸಕೂಡದು. ತಾನು ತೇಯ್ದ ಗಂಧವನ್ನು ಧರಿಸಬಾರದು. ಸ್ವಯಂ ತಾನು ಪೋಣಿಸಿದ ಮಾಲೆಯನ್ನು ಧರಿಸಬಾರದು. ಹೀಗೆ ಮಾಡಿದವನು ಶಕ್ರನಾಗಿದ್ದರೂ ಅವನ ಸಂಪತ್ತು ನಾಶವಾಗುತ್ತದೆ.

ಈ ವಿಧಿಯನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಪೂರ್ವಕಾಲದ ಜನರು ಹಿರಿಯರು ರಚಿಸಿದ ಸ್ತೋತ್ರಗಳಿಂದ ಭಗವಂತನನ್ನು ಸ್ತುತಿಸುತ್ತಿದ್ದರು. ಇದೇ ಕಾರಣಕ್ಕಾಗಿ ಶ್ರೀಮದಾಚಾರ್ಯರು ದ್ವಾದಶಸ್ತೋತ್ರದಲ್ಲಿ ''ಉನ್ನತಪ್ರಾರ್ಥಿತಾ-ಶೇಷಸಂಸಾಧಕಮ್''ಎಂಬುದಾಗಿ ಸ್ತುತಿಸಿದ್ದಾರೆ. ಹಿರಿಯರಾದ, ಭಗವದ್ಭಕ್ತರಾದ ಸಾಧಕರು ರಚಿಸಿದ ಸ್ತೋತ್ರವನ್ನು ಪಾರಾಯಣ ಮಾಡುವುದರಿಂದ ಪರಮಾತ್ಮ ಬಲು ಶೀಘ್ರವಾಗಿ ಒಲಿಯುತ್ತಾನೆ. ಅವರ ಇಷ್ಟಾರ್ಥಗಳನ್ನೆಲ್ಲವನ್ನೂ ಬಲು ಬೇಗನೇ ಪೂರ್ಣಗೊಳಿಸುತ್ತಾನೆ. ಎಂದು ಶ್ರೀಮದಾಚಾರ್ಯರು ತಿಳಿಸಿದ್ದಾರೆ. ಆದ್ದರಿಂದ ಎಂದಿಗೂ ತಾನು ರಚಿಸಿದ ಸ್ತೋತ್ರದಿಂದ ಪರಮಾತ್ಮನನ್ನು ಸ್ತುತಿಸಬಾರದು.

ಮತ್ತು ಅವೈಷ್ಣವರಾದ, ಅತಾತ್ತ್ವಿಕರಾದ ಜನರು ರಚಿಸಿದ ಸ್ತೋತ್ರ ಎಷ್ಟೇ ಶಬ್ದಾಲಂಕಾರಾದಿಗಳಿಂದ ಯುಕ್ತವಾಗಿರಲಿ ಅದನ್ನು ಸ್ತುತಿಗಾಗಿ ಉಪಯೋಗಿಸ-ಬಾರದು. ಕೇವಲ ತತ್ತ್ವಜ್ಞಾನಿಗಳು, ಭಗವದ್ಭಕ್ತರು ರಚಿಸಿದ ಸ್ತುತಿಗಳನ್ನು ಪಾರಾಯಣ ಮಾಡಬೇಕು.

ಮತ್ತೊಂದು ನಿಯಮ. ತಾನು ತೇಯ್ದ ಗಂಧವನ್ನು ಧರಿಸಬಾರದು. ಗಂಧವನ್ನು ಮತ್ತೊಬ್ಬರಿಂದಲೇ ತೆಗಿಸಬೇಕು.

ತಾನು ಪೋಣಿಸಿದ ಮಾಲೆಯನ್ನು ತಾನೇ ಧರಿಸಬಾರದು.

ಈ ಎಲ್ಲ ನಿಯಮಗಳನ್ನು ಹಿಂದಿನವರು ಅದಷ್ಟು ನಿಷ್ಠೆಯಿಂದ ಪಾಲಿಸುತ್ತಿದ್ದರು. ಆದರೆ ಈ ನಿಯಮ ಕಡ್ಡಾಯವಲ್ಲವೆಂದು ವೀರಮಿತ್ರೋದಯದಲ್ಲಿ ತಿಳಿಸುತ್ತಾರೆ.

ಯಾರು ಕೇವಲ ಭೋಗಕ್ಕಾಗಿ ಗಂಧ-ಪುಷ್ಪಗಳನ್ನು ಧರಿಸುತ್ತಾರೆಯೋ ಅವರಿಗೆ ಇದು ನಿಷಿದ್ಧವಾಗಿದೆ. ಆದರೆ ವಿಷ್ಣುನಿರ್ಮಾಲ್ಯವೆಂದು ಧರಿಸುವಾಗ ಈ ನಿಯಮದ ಅನ್ವಯವಾಗುವದಿಲ್ಲ.

ಸಂಪ್ರದಾಯ ಮತ್ತು ವೀರಮಿತ್ರೋದಯದ ವಚನವನ್ನು ಗಮನದಲ್ಲಿಟ್ಟು-ಕೊಂಡು ತಿಳಿಯುವದಾದರೆ-

ಸ್ತ್ರೀಯರು ಅಥವಾ ಮತ್ತೊಬ್ಬ ಪುರುಷರು ಮಾಲೆಯನ್ನು ಕಟ್ಟಬೇಕು. ಅದನ್ನು ದೇವರಿಗೆ, ದೇವತೆಗಳಿಗೆ ಏರಿಸಬೇಕು. ಪೂಜೆಗಾಗಿ ಗಂಧವನ್ನು ಮತ್ತೊಬ್ಬರು ತೇಯಬೇಕು. ಇಂತಹ ಗಂಧ-ಮಾಲೆಗಳನ್ನು ಭಗವಂತನಿಗೆ ಸಮರ್ಪಿಸಬೇಕು. ನಂತರ ತಾನು ಅವುಗಳನ್ನು ಧರಿಸಬೇಕು. ಇದರಿಂದ ವಿಶಿಷ್ಟವಾದ ಪುಣ್ಯವು ಬರುತ್ತದೆ.

ಗಂಧ ತೇಯಲು, ಮಾಲೆಯನ್ನು ಕಟ್ಟಲು ಮತ್ತೊಬ್ಬರಾರೂ ಇಲ್ಲದಿರುವಾಗ ಅವಶ್ಯವಾಗಿ ತಾನೇ ಆ ಕಾರ್ಯಗಳನ್ನು ಮಾಡಿ ದೇವರಿಗೆ ಸಮರ್ಪಿಸಬೇಕು. ನಂತರ ತಾನು ಧರಿಸಬೇಕು. ಇದರಿಂದ ಯಾವುದೇ ರೀತಿಯಾದ ದೋಷವು ಬರುವುದಿಲ್ಲ.

ವಿಷ್ಣುನಿರ್ಮಾಲ್ಯವನ್ನು ಧರಿಸುವುದು ಪ್ರಧಾನವಾದ ಧರ್ಮವಾಗಿದೆ. ಇದು ಸರ್ವರಿಗೂ ವಿಹಿತವಾಗಿದೆ. ವಿಹಿತವಾದ ವಿಷಯದಲ್ಲಿ ನಿಷೇಧವು ಪ್ರವೃತ್ತವಾಗುವುದಿಲ್ಲ.

ಹಲವರು ಕೇವಲ ಭೋಗಕ್ಕಾಗಿ ಪುಷ್ಪಮಾಲೆಯನ್ನು ಗಂಧವನ್ನು ಧರಿಸುತ್ತಾರೆ ಅಂಥವರಿಗೆ ಈ ನಿಷೇಧವು ಪ್ರವೃತ್ತವಾಗಿದೆ.

**೨೬. ಯಾವ ಬೆರಳಿನಿಂದ ಧರಿಸಬೇಕು**

ಗೋಪೀಚಂದನವನ್ನು ಧರಿಸುವುದಕ್ಕಾಗಿ ಅನೇಕನಿಯಮಗಳನ್ನು ಸ್ಮೃತಿಗಳು ತಿಳಿಸುತ್ತವೆ. ಪ್ರಕೃತ ಯಾವ ಬೆರಳಿನಿಂದ ಗೋಪೀಚಂದನವನ್ನು ಧರಿಸಬೇಕೆಂಬುದನ್ನು ಅದರ ಫಲವೇನೆಂಬುದನ್ನು ಈ ಸ್ಮೃತಿ ತಿಳಿಸುತ್ತದೆ-

ಅನಾಮಿಕಾ ಶಾಂತಿದೋಕ್ತಾ ಮಧ್ಯಮಾಽಯುಷ್ಕರೀ ಭವೇತ್ ।
ಅಂಗುಷ್ಠಂ ಪುಷ್ಟಿದಂ ಪ್ರೋಕ್ತಂ ತರ್ಜನೀ ಮೋಕ್ಷಸಾಧನೀ ॥

ಉಂಗುರದ ಬೆರಳಿನಿಂದ ಧರಿಸುವುದರಿಂದ ಶಾಂತಿಯು ದೊರೆಯುತ್ತದೆ. ನಡುವಿನ ಬೆರಳಿನಿಂದ ಧರಿಸುವುದರಿಂದ ಆಯುಷ್ಯ ಅಭಿವೃದ್ಧವಾಗುತ್ತದೆ.

ಅಂಗುಷ್ಠಬೆರಳು ಪುಷ್ಟಿಪ್ರದವಾಗಿದೆ. ತೋರುಬೆರಳು ಮುಕ್ತಿಪ್ರದವಾಗಿದೆ. ಈ ಕಾರಣಕ್ಕಾಗಿ ತೋರುಬೆರಳಿನಿಂದ ಗೋಪೀಚಂದನವನ್ನು ಧರಿಸುವ ಸಂಪ್ರದಾಯ ಇವತ್ತಿಗೂ ಇದೆ. ಆದ್ದರಿಂದ ಇದೇ ನಿಯಮವನ್ನು ಪಾಲಿಸಬೇಕು.

### ೨೭. ಕನ್ನಡಿಯನ್ನು ನೋಡಿ ಧರಿಸಬೇಕು

ಚಂದನವನ್ನು ಅಂಗಾರ-ಅಕ್ಷತೆಯನ್ನು ಕನ್ನಡಿ ನೋಡಿ ಹಚ್ಚಿಕೊಳ್ಳಬಾರದೆಂದು ಹಲವರು ಹೇಳುತ್ತಿರುತ್ತಾರೆ. ಈ ವಿಷಯದಲ್ಲಿ ಸ್ಕಂದಪುರಾಣದ ವಿಧಾನ ಈ ರೀತಿಯಾಗಿದೆ-

ವೀಕ್ಷ್ಯಾದರ್ಶೇ ಜಲೇ ವಾಥ ಯೋ ವಿದಧ್ಯಾತ್ ಪ್ರಯತ್ನತಃ ।
ಊರ್ಧ್ವಪುಡ್ರಂ ಮಹಾಭಾಗ ಸ ಯಾತಿ ಪರಮಾಂ ಗತಿಮ್ ॥ ಸ್ಕಂ.ಪು

ಶುದ್ಧವಾದ ಕನ್ನಡಿಯಲ್ಲಿ, ಆದು ಇಲ್ಲದಿದ್ದಾಗ ನಿಶ್ಚಲವಾದ ಜಲದಲ್ಲಿ-ಯಾದರೂ ನೋಡುತ್ತಾ ಪ್ರಯತ್ನಪೂರ್ವಕವಾಗಿ ಊರ್ಧ್ವಪುಂಡ್ರವನ್ನು ಧರಿಸಬೇಕು. ಸೌಂದರ್ಯವನ್ನು ಬೆಳಗಿಸುವ, ಔಚಿತ್ಯಪೂರ್ಣವಾದ ಅಲಂಕಾರ-ವಿದೆಂದು ನೋಡುವವರಿಗೆ ತೋರಬೇಕು. ಇದನ್ನು ನಾವೂ ಧರಿಸಬೇಕೆಂಬ ಬಯಕೆ ನೋಡಿದವರಲ್ಲಿ ಬಲವಾಗಬೇಕು. ಹೀಗೆ ಪ್ರಯತ್ನಪೂರ್ವಕವಾಗಿ ಧರಿಸುವುದರಿಂದ ಸದ್ಗತಿಯು ದೊರೆಯುತ್ತದೆ.

### ೨೮. ಹಣೆಯ ಮೇಲೆ ಧರಿಸುವುದು ಹೇಗೆ ?

ಹಲವರು ಮೂಗಿನ ತುದಿಯಿಂದ ಬ್ರಹ್ಮರಂಧ್ರದವರೆಗೆ ಗೋಪೀಚಂದನ-ವನ್ನು ಧರಿಸುತ್ತಾರೆ. ಈ ವಿಷಯದಲ್ಲಿ ''ನಾಸಿಕಾಮೂಲಮಾರಭ್ಯ ಹ್ಯಾಕೇಶಾಂತಂ ತು ನಿಕ್ಷಿಪೇತ್'' ಎಂಬ ಪ್ರಮಾಣವನ್ನು ಹೇಳುತ್ತಾರೆ. ಆದರೆ ಈ ಪ್ರಮಾಣದಲ್ಲಿ ಸ್ಥಳದ ವಿವಕ್ಷೆ ಸ್ಪಷ್ಟವಾಗಿ ಇಲ್ಲ. ಶ್ರೀನಿವಾಸತೀರ್ಥರು ಆಹ್ನಿಕಕೌಸ್ತುಭದಲ್ಲಿ ಪರಾಶರಸ್ಮೃತಿಯ ಉದಾಹರಣೆಯನ್ನು ಕೊಡುತ್ತಾ ಧರಿಸಲು ಯೋಗ್ಯವಾದ ಸ್ಥಳವನ್ನು ತಿಳಿಸುತ್ತಾರೆ. ನಿಷ್ಕೃಷ್ಟವಾದ ಈ ಪ್ರಮಾಣ ಈ ರೀತಿಯಾಗಿದೆ-

ಭ್ರುವೋರಧಸ್ತಾತ್ಕೇಶಾದಿಸ್ತದಾರಭ್ಯೋರ್ಧ್ವಪುಂಡ್ರಕಮ್ ।
ಧರೇನ್ನಿತ್ಯಂ ಮಹೀಪಾಲ ಕೇಶಾಂತಂ ವಿಷ್ಣುತತ್ಪರಃ ॥ ಆ.ಕೌ.ಪ.ಸ್ಮ

ಹುಬ್ಬಿನ ಕೆಳಭಾಗದಿಂದ ಕೇಶಗಳು ಪ್ರಾರಂಭವಾಗುವ ಸ್ಥಳದ ವರೆಗೆ ಊರ್ಧ್ವವಾಗಿ ಗೋಪೀಚಂದನವನ್ನು ಧರಿಸಬೇಕು. ಧರಿಸುವಾಗ ವಿಷ್ಣುಪರನಾಗಬೇಕು.

**೨೯. ದಂಡಾಕಾರ ಪುಂಡ್ರ**

ಲಲಾಟದಲ್ಲಿ ಯಾವ ಆಕಾರಯುಕ್ತವಾಗಿ ಪುಂಡ್ರವನ್ನು ಧರಿಸಬೇಕು ಎಂಬ ವಿಷಯವನ್ನು ಇದೇ ಸ್ಮೃತಿಯು ತಿಳಿಸುತ್ತದೆ-

ಊರ್ಧ್ವಪುಂಡ್ರಂ ಲಲಾಟೇ ತು ದಂಡಾಕಾರಂ ಸುಶೋಭನಮ್ ।
ಮಧ್ಯೇ ಛಿದ್ರೇಣ ಸಂಯುಕ್ತಂ ತಚ್ಛಿದ್ರಂ ಮಮ ಮಂದಿರಮ್ ॥

ಆ.ಕೌ.ಪ.ಸ್ಮೃ

ಊರ್ಧ್ವಪುಂಡ್ರಸ್ಯ ಮಧ್ಯೇ ತು ಲಲಾಟೇ ಸುಮನೋಹರೇ ।
ಲಕ್ಷ್ಮ್ಯಾ ಸಹ ಸಮಾಸೀನೋ ರಮತೇ ತತ್ರ ವೈ ಹರಿಃ ॥ ವೃ.ಹಾ.ಸ್ಮೃ

ನಿರಂತರಾಲಂ ಯಃ ಕುರ್ಯಾದೂರ್ಧ್ವಪುಂಡ್ರಂ ದ್ವಿಜಾಧಮಃ ।
ಸ ಹಿ ತತ್ರ ಸ್ಥಿತಂ ವಿಷ್ಣುಂ ಶ್ರಿಯಂ ಚೈವ ವ್ಯಪೋಹತಿ ॥ ವೃ.ಹಾ.ಸ್ಮೃ

ಲಲಾಟದಲ್ಲಿ ಪುಂಡ್ರವು ದಂಡಾಕಾರವಾಗಿರಬೇಕು. ಮಧ್ಯದಲ್ಲಿ ಛಿದ್ರ ಮಾಡಬೇಕು. ಆ ಮಧ್ಯಭಾಗ ಲಕ್ಷ್ಮೀನಾರಾಯಣರ ವಾಸಸ್ಥಾನಕ್ಕೆ ಯೋಗ್ಯವಾದ ಮಂದಿರವಾಗುತ್ತದೆ. ದಂಡಾಕಾರವಾಗಿರುವ, ಮಧ್ಯೇ ಛಿದ್ರಯುಕ್ತವಾದ ಈ ಪುಂಡ್ರವನ್ನು ನೋಡಿದವರಿಗೆ ಸನ್ಮಂಗಳವು ಪ್ರಾಪ್ತವಾಗುತ್ತದೆ. ಇದಕ್ಕೆ ವಿಪರೀತವಾಗಿ ದಂಡಾಕಾರವಾಗಿರದಂತೆ, ಛಿದ್ರ ಮಾಡದೇ ಪುಂಡ್ರವನ್ನು ಧರಿಸಿದರೆ ಲಕ್ಷ್ಮೀನಾರಾಯಣರು ಅನುಗ್ರಾಹಕರಾಗಿ ಅವನಲ್ಲಿ ಇರುವುದಿಲ್ಲ. ಲಕ್ಷ್ಮೀನಾರಾಯಯಣರ ವಾಸಸ್ಥಾನವಾಗದ ಈ ಪುಂಡ್ರವನ್ನು ನೋಡುವುದು ಅಮಂಗಳಕರವಾಗಿದೆ. ಆದ್ದರಿಂದ ಹಾಗೆ ಸರ್ವಥಾ ಧರಿಸಬಾರದು.

**೩೦. ಎಲ್ಲ ಕಡೆಗೂ ಛಿದ್ರಯುಕ್ತವಾದ ಪುಂಡ್ರವಲ್ಲ**

ಸರ್ವತ್ರ ಸಾಂತರಾಲಾನಿ ಕುರ್ಯಾತ್ಪುಂಡ್ರಾಣಿ ಬುದ್ಧಿಮಾನ್ ।
ತತ್ತದ್ದೇವಂ ಚತುರ್ಥ್ಯಂತಂ ವಿನ್ಯಸೇತ್ಪುಂಡ್ರಕೇಷು ಚ ॥ ಅ.ಪು

ಯಾವುದೇ ಕರ್ಮವನ್ನು ಮಾಡುವಾಗ ತಿಳಿದುಕೊಂಡು ಕರ್ಮವನ್ನು ಮಾಡಬೇಕು. ಪ್ರಕೃತ ಪುಂಡ್ರಧಾರಣೆಯನ್ನು ಕೂಡಾ ಹೇಗೆ ಮಾಡಬೇಕೆಂಬುದನ್ನು ತಿಳಿಯಬೇಕು.

ಹಣೆಯ ಮೇಲೆ ಮಾತ್ರ ಛಿದ್ರಯುಕ್ತವಾಗಿ, ಉಳಿದ ಸ್ಥಳಗಳಲ್ಲಿ ಛಿದ್ರಮಾಡದೇ ಪುಂಡ್ರಗಳನ್ನು ನಾವೆಲ್ಲ ಧರಿಸುತ್ತೇವೆ. ಆದರೆ ಎಲ್ಲ ಪುಂಡ್ರಗಳೂ ಛಿದ್ರಯುಕ್ತವಾಗಿರಬೇಕೆಂದು ಪ್ರಮಾಣಗಳು ತಿಳಿಸುತ್ತವೆ. ಹಾಗಾದರೆ ನಾವು ಮಾಡುವ ಈ ಆಚಾರ ಸ್ಮೃತಿವಿರುದ್ಧವಲ್ಲವೇ ಎಂಬ ಸಂದೇಹ ಬರುವುದು ಸಹಜ. ಈ ವಿಷಯದಲ್ಲಿ ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯರು ''ವಸ್ತುತಸ್ತು'' ಎಂಬ ವಚನಗಳಿಂದ ನಮಗೆ ತಿಳಿಸುವ ಸಾಂಪ್ರದಾಯಿಕವಾದ ವಿಷಯ ಬಹಳ ಅಪರೂಪವಾಗಿದೆ. ಆ ವಿಷಯಗಳನ್ನು ಗಮನಿಸಬೇಕು-

ವಸ್ತುತಸ್ತು ಸರ್ವಪುಂಡ್ರಾಣಾಂ ಸಚ್ಛಿದ್ರತ್ವೇನ ಧಾರಣಂ ಶಿಷ್ಟಾಚಾರವಿರುದ್ಧತ್ವಾತ್ ತ್ಯಾಜ್ಯಮ್ । ಶ್ರೀಮದಾಚಾರ್ಯಚರಣಕಾಲಪ್ರಭೃತಿ ಏತತ್ಕಾಲಪರ್ಯಂತಂ ಸ್ಥಿತೈಃ ಸಂಪ್ರದಾಯಜ್ಞೈಃ ಉಡುಪೀಕೃಷ್ಣಪೂಜಕೈಃ ಅಷ್ಟಶ್ರೀಪಾದೈಃ, ಘಟ್ಟೋಪರಿ ಸ್ಥಿತೈಃ ರಘೂತ್ತಮಶ್ರೀಪಾದಮಠಸ್ಥೈಃ ಶ್ರೀಪಾದೈಃ, ವಿಜಯೀಂದ್ರತೀರ್ಥಶ್ರೀಪಾದಮಠಸಂಪ್ರದಾಯಸ್ಥೈಃ ಶ್ರೀಪಾದೈಃ, ಶ್ರೀಪಾದರಾಯಮಠಸ್ಥೈಃ ಶ್ರೀಪಾದೈಃ, ವ್ಯಾಸರಾಯತೀರ್ಥಶ್ರೀಪಾದಸಂಪ್ರದಾಯಸಂಪ್ರದಾಯಸ್ಥೈಃ ಇತಃ ಪೂರ್ವಂ ವಿದ್ಯಮಾನೈಃ ಶ್ರೀಪಾದೈಃ ಲಲಾಟೇತರಪುಂಡ್ರಾಣಾಮಚ್ಛಿದ್ರತ್ವೇನ ಧಾರಣಾತ್ । ಏತಚ್ಚ ಸಂಪ್ರದಾಯಪರಂಪರಯಾ ಜ್ಞಾಯತೇ । ''ಆಚಾರಶ್ಚೈವ ಸಾಧೂನಾಂ'' ''ಸ್ಮೃತಿಶೀಲೇ ಚ ತದ್ವಿದಾಮ್'' ''ಆಚಾರಾಚ್ಚ ಸ್ಮೃತಿಂ ಜ್ಞಾತ್ವಾ'' ''ಶಾಸ್ತ್ರಂ ಚ ಸಂಪ್ರದಾಯೋಽಪಿ ಪ್ರಮಾಣಂ'' ಇತ್ಯಾದಿ ವಚನಾದಾಚಾರಸ್ಯಾಽಪಿ ಅಸಾಧಾರಣತ್ವೇನ ಜ್ಞಾಪನಾತ್ ।

ಎಲ್ಲ ಪುಂಡ್ರಗಳನ್ನು ಸಚ್ಛಿದ್ರವಾಗಿ ಧರಿಸುವುದು ಶಿಷ್ಟಾಚಾರವಿರುದ್ಧವಾಗಿದ್ದರಿಂದ ಅದು ಸ್ಮೃತಿವಿಹಿತವಾಗಿದ್ದರೂ ಪರಿತ್ಯಜಿಸಬೇಕು. ಈ ವಿಷಯದಲ್ಲಿ ಸಂಕೋಚವನ್ನು ಸರ್ವಥಾ ಮಾಡಿಕೊಳ್ಳಬಾರದು. ಶ್ರೀಮದಾಚಾರ್ಯರಿಂದ ಇಲ್ಲಿಯವರೆಗಿನ ಜ್ಞಾನಿಗಳಾರೂ ಲಲಾಟದಲ್ಲಿಯ ಪುಂಡ್ರವನ್ನು ಬಿಟ್ಟು ಉಳಿದ

ಪುಂಡ್ರಗಳನ್ನು ಸಚ್ಛಿದ್ರವಾಗಿ ಧರಿಸಿರುವುದಿಲ್ಲ. ಉಡುಪಿಯಲ್ಲಿ ಕೃಷ್ಣಾರ್ಚಕರಾದ ಅಷ್ಟಮಠಾಧಿಪತಿಗಳು, ಘಟ್ಟದ ಮೇಲಿರುವ ರಘೂತ್ತಮಶ್ರೀಪಾದಮಠದ ಅಧಿಪತಿಗಳಾದ ಯತಿಗಳು, ವಿಜಯೀಂದ್ರತೀರ್ಥಶ್ರೀಪಾದಮಠದ ಯತಿಗಳು, ಶ್ರೀಪಾದರಾಜಮಠದ ಯತಿಗಳು, ವ್ಯಾಸರಾಜಮಠದ ಯತಿಗಳು ಮತ್ತು ಈ ಮಠದ ಸಂಪ್ರದಾಯಸ್ಥರು ಹಣೆಯ ಮೇಲೆ ಬಿಟ್ಟು ಇತರ ಯಾವ ಪುಂಡ್ರಗಳನ್ನೂ ಸಚ್ಛಿದ್ರವಾಗಿ ಧರಿಸಿಲ್ಲ.

ಸಜ್ಜನರ ಆಚಾರವೂ ಒಂದು ಪ್ರಮಾಣವೇ ಆದ್ದರಿಂದ ಇದು ಪ್ರಮಾಣಕ್ಕಿಂತಲೂ ಪ್ರಬಲವಾದದ್ದರಿಂದ ಸಜ್ಜನರ ಆಚಾರವನ್ನೇ ಅವಲಂಬಿಸಬೇಕು. ಪ್ರಮಾಣಕ್ಕೆ ಅನುಗುಣವಾಗಿ ಪಾಲಿಸಬಾರದು.

**೩.೧. ಇತರ ಸ್ಥಳದಲ್ಲಿ ಪುಂಡ್ರಧಾರಣೆಯ ಆಕಾರ**

ಹೃದಯ ಮೊದಲಾದ ಸ್ಥಳದಲ್ಲಿ ಯಾವ ಆಕಾರದಲ್ಲಿ ಧರಿಸಬೇಕೆಂಬ ವಿಶೇಷವಾದ ವಿಚಾರವನ್ನು ಶ್ರೀನಿವಾಸತೀರ್ಥರು ಪರಾಶರಸ್ಮೃತಿಯ ಆಧಾರದಿಂದ ತಮ್ಮ ಆಹ್ನಿಕಕೌಸ್ತುಭದಲ್ಲಿ ತಿಳಿಸುತ್ತಾರೆ-

ಹೃದಯೇ ಪದ್ಮಕುಡ್ಮಲಮ್ ॥ ಆ.ಕೌ.ಪ.ಸ್ಮ
ವೇಣುಪತ್ರಾಕೃತೀರ್ಬಾಹ್ವೋರನ್ಯಾನ್ ದೀಪಾಕೃತೀನ್ ನ್ಯಸೇತ್ ॥

ಆ.ಕೌ.ಪ.ಸ್ಮ

ಹೃದಯದಲ್ಲಿ ಪದ್ಮದ ಮೊಗ್ಗೆಯಂತೆ ಪುಂಡ್ರವನ್ನು ಧರಿಸಬೇಕು. ಬಾಹುಗಳಲ್ಲಿಯ ಪುಂಡ್ರಗಳು ಬಿದಿರಿನ ಎಲೆಯ ಆಕಾರದಲ್ಲಿರಬೇಕು. ಉಳಿದ ಸ್ಥಳಗಳಲ್ಲಿ ದೀಪದ ಆಕಾರದಲ್ಲಿ ಪುಂಡ್ರಗಳಿರಬೇಕು.

**೩.೨. ಊರ್ಧ್ವಪುಂಡ್ರನಿಷೇಧ ವಾಸ್ತವವಲ್ಲ**

ಶ್ರಾದ್ಧಕಾಲದಲ್ಲಿ ಊರ್ಧ್ವಪುಂಡ್ರವನ್ನು ಧರಿಸಬಾರದೆಂದು ಹಲವರು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ಆ ನಿಷೇಧ ವಾಸ್ತವವಲ್ಲವೆಂಬುದನ್ನು ನಾರದಪುರಾಣ ತಿಳಿಸುತ್ತದೆ. ಅದನ್ನು ಗಮನಿಸಿ-

ಊರ್ಧ್ವಪುಂಡ್ರಂ ಚ ತುಲಸೀಂ ಶ್ರಾದ್ಧೇ ನೇಚ್ಛಂತಿ ಕೇಚನ ।
ವೃಥಾ ಶ್ರಾದ್ಧಂ ಪರಿತ್ಯಾಜ್ಯಃ ತಸ್ಮಾತ್ ಶ್ರೇಯೋಽರ್ಥಿಭಿಃ ದ್ವಿಜೈಃ ॥

ನಾ.ಪು

ಊರ್ಧ್ವಪುಂಡ್ರಧಾರಣೆಯನ್ನು ಮತ್ತು ತುಲಸಿಯ ಉಪಯೋಗವನ್ನು ಶ್ರಾದ್ಧಕಾಲದಲ್ಲಿ ಮಾಡಬಾರದೆಂದು ಹಲವರು ಹೇಳುತ್ತಾರೆ. ಆದರೆ ಊರ್ಧ್ವಪುಂಡ್ರ ಧರಿಸದೇ, ತುಲಸಿಯನ್ನು ಉಪಯೋಗಿಸದೇ ಆಚರಿಸಿದ ಶ್ರಾದ್ಧವು ವ್ಯರ್ಥವಾಗಿದೆ. ಅಂತಹ ಶ್ರಾದ್ಧದಲ್ಲಿ ಭೋಜನವನ್ನು ಸರ್ವಥಾ ಮಾಡಬಾರದು. ಯಾವುದೇ ಉದ್ದೇಶದಿಂದ ಭೋಜನವನ್ನು ಮಾಡಿದರೆ ಅವರ ಶ್ರೇಯಸ್ಸೆಲ್ಲ ನಷ್ಟವಾಗಿ ಹೋಗುತ್ತದೆ. ಆದ್ದರಿಂದ ಈ ವಿಷಯದಲ್ಲಿ ಸಾಧಕರು ಜಾಗರೂಕವಾಗಿರಬೇಕು.

**೩೩. ಪುಂಡ್ರ ಹೇಗಿರಬೇಕು**

**ಊರ್ಧ್ವಪುಂಡ್ರಮೃಜುಂ ಸಾಮ್ಯಂ (ಸೌಮ್ಯಂ)ಲಲಾಟೇ ಯಸ್ಯ ದೃಶ್ಯತೇ ।**
**ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ॥ ಕೃ.ಮ**

**ಸಾಮ್ಯಂ ಸರ್ವದೇಹೇಷು ಸಮತ್ವೇನ ವಿದ್ಯಮಾನತ್ವಾತ್ಸಮೋ ಹರಿಃ ತತ್ಸಂಬಂಧಿನಾಮಯುಕ್ತಂ ಸಾಮ್ಯಂ ''ಲಲಾಟೇ ಕೇಶವಂ ವಿದ್ಯಾತ್'' ಇತಿ ವಚನಾನುಸಂಧಾನಪೂರ್ವಕಂ ಧೃತಮಿತ್ಯರ್ಥಃ ॥ ಕೋಸೇರೀ**

**ಯಸ್ಯ ಲಲಾಟೇ ಊರ್ಧ್ವಪುಂಡ್ರಂ ಗೋಪೀಚಂದನೇನ ಋಜುಂ ಅವಕ್ರಂ ಸೌಮ್ಯಂ ದೃಷ್ಟಿಪ್ರಿಯಂ ದೃಶ್ಯತೇ ದ್ರಷ್ಟೃಭಿಃ । ಸ ಊರ್ಧ್ವಪುಂಡ್ರಧರ್ತಾ ॥**
ಸ್ಮೃ.ಕೃ.ವ್ಯಾ

ಊರ್ಧ್ವಪುಂಡ್ರ ನೇರವಾಗಿರಬೇಕು. ಅಂಕುಡೊಂಕಾಗಿರಬಾರದು. ಸರ್ವತ್ರ ಸಮನಾಗಿರುವುದರಿಂದ ಸಮನಾಮಕನಾದ ಭಗವಂತನ ಕೇಶವಾದಿ ನಾಮಗಳಿಂದ ಯುಕ್ತವಾಗಿರಬೇಕು. ನೋಡುವವರಿಗೆ ಪ್ರಿಯವಾಗಿರಬೇಕು. ಇಂತಹ ಊರ್ಧ್ವಪುಂಡ್ರವು ಯಾವನ ಹಣೆಯಲ್ಲಿ ಕಂಗೊಳಿಸುವುದೋ ಅವನು ಚಂಡಾಲನಾಗಿದ್ದರೂ ಅವನ ಆತ್ಮ ಶುದ್ಧವಾಗುತ್ತದೆ. ಎಲ್ಲರಿಗೂ ಅವನು ಪೂಜ್ಯನಾಗುತ್ತಾನೆ.

ಶೈವರು ಕೂಡಾ ಮೊದಲು ಊರ್ಧ್ವಪುಂಡ್ರವನ್ನು ಧರಿಸಿಯೇ ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಬೇಕು. ಶೈವರು ಕೂಡಾ ಬ್ರಾಹ್ಮಣರೇ ಆಗಿರುತ್ತಾರೆ.

ಬ್ರಾಹ್ಮಣರಿಗೆ ವಿಹಿತವಾದದ್ದು ಊರ್ಧ್ವಪುಂಡ್ರ. ಈ ವಿಷಯವನ್ನು ತಿಳಿಸುವ ವಚನಗಳು ಹೀಗಿವೆ-

ಶೈವೈಸ್ತೂರ್ಧ್ವಪುಂಡ್ರಧಾರಣಾನಂತರಮೇವ ಭಸ್ಮನಾ ತ್ರಿಪುಂಡ್ರ-ಧಾರಣಮಪಿ ಕಾರ್ಯಮ್ । ಯತೋ ದ್ವಿಜಾನಾಮೂರ್ಧ್ವಪುಂಡ್ರ-ಸ್ಯಾವಶ್ಯಕತ್ವಮ್ ॥ ದಿ.ಮೀ

ಬ್ರಹ್ಮಾಂಡಪುರಾಣ ಪುಂಡ್ರಧಾರಣೆಯ ಮಹತ್ತ್ವವನ್ನು ಈ ರೀತಿಯಾಗಿ ತಿಳಿಸುತ್ತದೆ-

ಮತ್ಪ್ರಿಯಾರ್ಥಂ ಶುಭಾರ್ಥಂ ವಾ ರಕ್ಷಾರ್ಥಂ ಚತುರಾನನ ।
ಮದ್ಭಕ್ತೋ ಧಾರಯೇನ್ನಿತ್ಯಮೂರ್ಧ್ವಪುಂಡ್ರಮತಂದ್ರಿತಃ ॥

ನನ್ನ ಪ್ರೀತಿಯನ್ನು ಪಡೆಯುವ ಉದ್ದೇಶದಿಂದ, ಶುಭವನ್ನು ಬಯಸಿ, ರಕ್ಷೆಗಾಗಿ ನನ್ನ ಭಕ್ತರೆಲ್ಲರೂ ಊರ್ಧ್ವಪುಂಡ್ರವನ್ನು ಧರಿಸಬೇಕು. ಈ ವಿಷಯದಲ್ಲಿ ಆಲಸ್ಯ ಸರಿಯಲ್ಲ.

ರಕ್ಷೆಗಾಗಿ ಎಂದರೆ ಮಕ್ಕಳು ಗ್ರಹರೋಗಾದಿಗಳಿಂದ ಪೀಡಿತರಾಗಿ ಭಯಪಟ್ಟಿರುವಾಗ ದ್ವಾದಶಾಂಗಗಳಲ್ಲಿ ವಿಶೇಷವಾಗಿ ಗೋಮಯದಿಂದ ಊರ್ಧ್ವಪುಂಡ್ರವನ್ನು ಹಚ್ಚಬೇಕು.

**೩೪. ಗತಭೀತನಿಗೆ ಭಾಮೆ ರಕ್ಷೆ ಇಕ್ಕುವಳಂತೆ**

ರಕ್ಷೆಗಾಗಿ ಊರ್ಧ್ವಪುಂಡ್ರವನ್ನು ಹಚ್ಚಬೇಕೆಂಬ ಈ ವಿಷಯವನ್ನು ಶ್ರೀಮದ್ಭಾಗವತ ಬಹಳ ರೋಚಕವಾಗಿ ತಿಳಿಸುತ್ತದೆ-

ರಕ್ಷಾಂ ಚಕ್ರುಃ ಗೋಶಕೃತಾ ದ್ವಾದಶಾಂಗೇಷು ನಾಮಭಿಃ ॥

ಶ್ರೀಕೃಷ್ಣಪರಮಾತ್ಮ ಪೂತನಾದಿದೈತ್ಯರನ್ನು ಅನಾಯಾಸವಾಗಿ ಸಂಹಾರ-ಮಾಡುತ್ತಿದ್ದಾನೆ. ಇದಲ್ಲ ಕಾಕತಾಲೀಯವೆಂದು, ಇದರಿಂದ ಮಗುವಾದ ಕೃಷ್ಣ ಬೆದರಿದ್ದಾನೆಂದು ನಂದ-ಯಶೋದೆಯರು ತಿಳಿದಿದ್ದಾರೆ. ಹೀಗಾಗಿ ಅವನಿಗೆ ರಕ್ಷೆಯನ್ನು ಹಾಕುತ್ತಿದ್ದಾರಂತೆ.

ಗೋಮಯದಿಂದ ಶ್ರೀಕೃಷ್ಣನ ದ್ವಾದಶಾಂಗಗಳಲ್ಲಿ ಕೇಶವಾದಿ ದ್ವಾದಶನಾಮಗಳಿಂದ ಊರ್ಧ್ವಪುಂಡ್ರವನ್ನು ಹಚ್ಚುತ್ತಿದ್ದಾರೆ. ಇದರಿಂದ ಮಕ್ಕಳ ಭಯವು ನಿವಾರಣೆಯಾಗುತ್ತದೆ. ಮಕ್ಕಳಿಗೆ ರಕ್ಷೆಯನ್ನಿಡುವ ಈ ಪದ್ಧತಿ ಬಹಳ ಅಪರೂಪದ್ದಾಗಿದೆ. ಗೋಮಯವು ಸಿಗದಿರುವಾಗ ತುಲಸೀಮೃತ್ತಿಕೆ, ಗೋಪೀಚಂದನ ಮೊದಲಾದವುಗಳಿಂದ ರಕ್ಷೆಯನ್ನು ಹಾಕುವ ಈ ಪದ್ಧತಿಯನ್ನು ಮಕ್ಕಳಿಗಾಗಿ ಅವಶ್ಯವಾಗಿ ಪಾಲಿಸಬೇಕು.

ರಕ್ಷಾರ್ಥಂ ಎಂಬ ಮಾತನ್ನು ಬಹಳಸುಂದರವಾಗಿ ಈ ವಚನ ವಿವರಿಸುತ್ತದೆ ಈ ಮಾತನ್ನು ಗಮನಿಸಬೇಕು-

ಗ್ರಹಾ ನ ಪೀಡ್ಯಂತಿ ನ ರಾಕ್ಷಸಾಂ ಗಣಾ
ಯಕ್ಷಃಪಿಶಾಚೋರಗಭೂತನಾಯಕಾಃ ।
ಲಲಾಟಪಟ್ಟೇ ಸುತ ಗೋಪಿಚಂದನಂ
ಸಂತಿಷ್ಠತೇ ಯಸ್ಯ ಮಮ ಪ್ರಭಾವಾತ್ ॥ ಸ್ಕಂ.ಪು

ಹಣೆಯ ಮೇಲೆ ಯಾರು ಗೋಪೀಚಂದನವನ್ನು ಧರಿಸಿರುವನೋ ಅವನಿಗೆ ನನ್ನ ಪ್ರಭಾವದಿಂದ ಗ್ರಹಗಳ, ರಾಕ್ಷಸರ, ಯಕ್ಷರ, ಪಿಶಾಚಗಳ, ಸರ್ಪಗಳ, ಭೂತಗಳ ಪೀಡೆಯಾಗುವುದಿಲ್ಲ.

### ೩೫. ಧಾರಣವಿಧಿ

ಆಚ್ಛಾದ್ಯ ವಾಸಸೀ ಧೌತೇ ಪುನರಾಚಮನಂ ಚರೇತ್ ।
ಪ್ರಾಣಾಯಾಮಂ ಸ್ವಯಂ ಕೃತ್ವಾ ತಿಲಕಾಯುಧಧಾರಣಮ್ ॥

ಕರಿಷ್ಯ ಇತಿ ಸಂಕಲ್ಪ್ಯ ವಾಮಹಸ್ತೇ ಜಲಂ ಕ್ಷಿಪೇತ್ ॥
ಮೃದ್ವಾರಿ ಚಂದನಂ ಭಸ್ಮ ವಾಮಹಸ್ತೇ ನಿಧಾಪಯೇತ್ ॥ ವಿ.ಸ್ಮೃ

ಆಚಮ್ಯ ಗೋಪ್ಯಪುಂಡ್ರಾಣಿ ಧಾರಯೇತ್ತು ಸಮಾಹಿತಃ ।
ತರ್ಜನ್ಯಗ್ರಪ್ರಮಾಣೇನ ಮಧ್ಯೇ ಛಿದ್ರೇಣ ಸಂಯುತಮ್ ॥

ಮೂರ್ಧ್ನಿ ಮೂಲೇನ ಮಂತ್ರೇಣ ಶೇಷಂ ದ್ವಾದಶನಾಮಭಿಃ ।
ಸ್ಥಾನೇಷ್ವೇಷು ದ್ವಿಜಃ ಕುರ್ಯಾನ್ನಮೋಽಂತ್ಯೈಃ ಪ್ರಣವೇನ ಚ ॥ ಶೌನಕಃ

ಪರಿಶುಭ್ರವಾದ ಮಡಿಯ ವಸ್ತ್ರಗಳನ್ನು ಧರಿಸಬೇಕು. ಪುನರಾಚಮನವನ್ನು ಮಾಡಬೇಕು. ಪ್ರಾಣಾಯಾಮವನ್ನು ಮಾಡಬೇಕು. ನಂತರ ನಾನು ತಿಲಕವನ್ನು ಮತ್ತು ಮುದ್ರೆಗಳನ್ನು ಧರಿಸುತ್ತೇನೆ ಎಂದು ಸಂಕಲ್ಪ ಮಾಡಬೇಕು.

**೩೬. ಸಂಕಲ್ಪ**

ಆಚಮ್ಯ ಪಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ, ಏವಂಗುಣ-ವಿಶೇಷಣವಿಶಿಷ್ಟಾಯಾಂ ಶುಭತಿಥೌ ಭಾರತೀರಮಣಮುಖ್ಯಪ್ರಾಣಾಂತ-ರ್ಗತಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಕರಿಷ್ಯಮಾಣ- ಕರ್ಮಣಾಂ ಸಾಂಗತಾಸಿದ್ಧ್ಯರ್ಥಂ ಗೋಪೀಚಂದನಾಭಿಮಾನಿಮನ್ಮ- ಥಾಂತರ್ಯಾಮಿ ಶ್ರೀವರಾಹಾತ್ಮಕ (ಶುಕ್ಲಪಕ್ಷೇ-ಕೇಶವಾದಿದ್ವಾದಶ-ಮೂರ್ತ್ಯಾತ್ಮಕ, ಕೃಷ್ಣಪಕ್ಷೇ-ಸಂಕರ್ಷಣಾದಿದ್ವಾದಶಮೂರ್ತ್ಯಾತ್ಮಕ) ತಿಲಕಧಾರಣಂ, ಶ್ರೀಮುದ್ರಾ-ಭಿಮಾನಿಶ್ರೀದುರ್ಗಾಂತರ್ಯಾಮಿ- ಕೃದ್ದೋಲ್ಕಾದಿಪಂಚಮೂರ್ತ್ಯಾತ್ಮಕ ಶ್ರೀಚಕ್ರಾದಿಪಂಚಮುದ್ರಾಧಾರಣಂ ಚ ಕರಿಷ್ಯೇ ॥

ಹೀಗೆ ಸಂಕಲ್ಪಮಾಡಬೇಕು. ನಂತರ ಶ್ರೀಹರಿಯ ಧ್ಯಾನವನ್ನು ಮಾಡಬೇಕು.

**೩೭. ಶ್ರೀಹರಿಧ್ಯಾನ**

ಶಂಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ ।
ಗೋವಿಂದ ಪುಂಡರೀಕಾಕ್ಷ ರಕ್ಷ ಮಾಂ ಶರಣಾಗತಮ್ ॥
ಇತಿ ಮಾಂ ಧ್ಯಾತ್ವಾ ।

ಹೇ ಭಗವನ್ ! ನೀನು ಶಂಖ-ಚಕ್ರ-ಗದಾಪಾಣಿಯಾಗಿರುವಿ. ದ್ವಾರಕೆಯು ನಿನ್ನ ನೆಚ್ಚಿನ ಸ್ಥಾನವಾಗಿದೆ. ನೀನು ಚ್ಯುತಿರಹಿತನಾಗಿರುವಿ. ನೀನು ಎಲ್ಲ ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿರುವಿ. ಸದಾ ಅರಳಿದ ಕಂಗಳಿಂದ ಯುಕ್ತನಾಗಿರುವಿ. ನಿನಗೆ ಶರಣಾಗತನಾದ ನನ್ನನ್ನು ರಕ್ಷಿಸು. ಜ್ಞಾನದಾನವನ್ನು ಮಾಡು ಅದೇ ನಮ್ಮನ್ನು ಸಂರಕ್ಷಿಸುತ್ತದೆ.

**೩೮. ಗೋಪೀಚಂದನಪ್ರಾರ್ಥನ**

ನಮಸ್ಕೃತ್ಯ ಉದ್ಧೃತ್ಯ,

ಮೊದಲು ಗೋಪೀಚಂದನವನ್ನು ನಮಸ್ಕರಿಸಿ ಕೈಯಲ್ಲಿ ತೆಗೆದುಕೊಳ್ಳ-ಬೇಕು. ನಂತರ ಈ ರೀತಿಯಾಗಿ ಪ್ರಾರ್ಥಿಸಬೇಕು-

**ಮೃತ್ತಿಕೇ ಧಾರಯಿಷ್ಯಾಮಿ ಭಕ್ತ್ಯಾ ತ್ವಾಂ ಕೇಶವಪ್ರಿಯೇ ।**
**ತ್ವಯಾ ಸ್ಪೃಷ್ಟೋ ಗಮಿಷ್ಯಾಮಿ ವಿಷ್ಣುಲೋಕಂ ಸನಾತನಮ್ ॥**

ಹೇ ಮೃತ್ತಿಕೇ ! ಕೇಶವನಿಗೆ ಅತ್ಯಂತಪ್ರಿಯವಾದ ನಿನ್ನನ್ನು ವಿಷ್ಣುವಿನ ಮೇಲಿನ ಭಕ್ತಿಯಿಂದ ಧರಿಸುತ್ತೇನೆ. ನಿನ್ನ ಸ್ಪರ್ಶಮಾತ್ರದಿಂದ ನಾನು ಶಾಶ್ವತವಾದ ವಿಷ್ಣುಲೋಕವನ್ನು ಪಡೆಯುತ್ತೇನೆ.

ಪುಂಡ್ರವನ್ನು ಧರಿಸುವಾಗ ಈ ರೀತಿಯಾಗಿ ಪ್ರಾರ್ಥಿಸಬೇಕು-

**ಗೋಪೀಚಂದನ ಪಾಪಘ್ನ ವಿಷ್ಣುದೇಹಸಮುದ್ಭವ ।**
**ಚಕ್ರಾಂಕಿತ ನಮಸ್ತುಭ್ಯಂ ಧಾರಣಾನ್ಮುಕ್ತಿದೋ ಭವ ॥** ವಾ.ಉ

ಗೋಪೀಚಂದನ ಪಾಪಪರಿಹಾರಕವಾಗಿದೆ. ವಿಷ್ಣುವಿನ ದೇಹದಿಂದ ಉತ್ಪನ್ನವಾಗಿದೆ. ವಿಷ್ಣುಚಕ್ರದಿಂದ ಅಂಕಿತವಾಗಿದೆ. ಗೋಪೀಚಂದನದ ಧಾರಣೆಯಿಂದ ಮುಕ್ತಿಯು ದೊರೆಯುತ್ತದೆ. ಇಂತಹ ಗೋಪೀಚಂದನಕ್ಕೆ ನಮಸ್ಕಾರಗಳು ಎಂದು ಅದನ್ನು ಭಕ್ತಿಯಿಂದ ನಮಸ್ಕರಿಸಬೇಕು.

**ಧಾರಣಾದೂರ್ಧ್ವಪುಂಡ್ರಸ್ಯ ಶರೀರಂ ಮಂದಿರಂ ಹರೇಃ ॥**

ಊರ್ಧ್ವಪುಂಡ್ರವನ್ನು ಧರಿಸಿದವನ ಶರೀರದಲ್ಲಿ ಭಗವಂತ ಬಂದು ನೆಲೆಸುತ್ತಾನೆ. ಪರಮಾತ್ಮನ ಸನ್ನಿಧಾನವನ್ನು ಪಡೆದ ಅವನ ದೇಹ ದೇವಾಲಯವಾಗುತ್ತದೆ. ಇದು ಗೋಪೀಚಂದನದ ಮಹಿಮೆ ಎಂಬುದಾಗಿ ತಿಳಿದು ಅದನ್ನು ಧ್ಯಾನಮಾಡಬೇಕು.

ಹೀಗೆ ಸಂಕಲ್ಪವನ್ನು ಮಾಡಿ, ಶ್ರೀಹರಿಯನ್ನು ಧ್ಯಾನಮಾಡಿ, ಗೋಪೀಚಂದನ-ವನ್ನು ಪ್ರಾರ್ಥಿಸಿ, ಎಡಗೈಯಲ್ಲಿ ನೀರನ್ನು ಹಾಕಿಕೊಳ್ಳಬೇಕು. ನೀರನ್ನು ಹಾಕಿಕೊಳ್ಳುವಾಗ ''ಇಮಂ ಮೇ'' ಎಂಬ ಮಂತ್ರವನ್ನು ಪಠಿಸಬೇಕು.

### ೩೯. ಧಾರಣವಿಧಿ

ಪುಂಡ್ರವನ್ನು ಧರಿಸುವ ಪ್ರಕಾರವನ್ನು ಪದ್ಮಪುರಾಣ ಈ ರೀತಿಯಾಗಿ ತಿಳಿಸುತ್ತದೆ.

ಗೃಹೀತ್ವಾ ಮೃತ್ತಿಕಾಂ ಭಕ್ತ್ಯಾ ವಿಷ್ಣುಪಾದಜಲೈಸ್ಸಹ ।
ಧೃತ್ವಾ ಪುಂಡ್ರಾಣಿ ಚಾಂಗೇಷು ವಿಷ್ಣುಸಾಯುಜ್ಯಮಾಪ್ನುಯಾತ್ ॥

ಪ.ಪು

ವಿಷ್ಣುಪಾದೋದಕವನ್ನು ಎಡಗೈಯಲ್ಲಿ ಹಾಕಿಕೊಳ್ಳಬೇಕು. ಆ ಪಾದೋದಕದಲ್ಲಿಯೇ ಗೋಪೀಚಂದನವನ್ನು ತೇಯಬೇಕು. ಈ ಗೋಪೀ-ಚಂದನವನ್ನು ದ್ವಾದಶಾಂಗಗಳಲ್ಲಿ ಧರಿಸಬೇಕು. ಅವನು ವಿಷ್ಣುಸಾಯುಜ್ಯವನ್ನು ಪಡೆಯುತ್ತಾನೆ.

ಪುಂಡ್ರವನ್ನು ಧರಿಸುವುದಕ್ಕಾಗಿ ಶಾಲಗ್ರಾಮದ ನಿರ್ಮಾಲ್ಯವನ್ನು ಉಪಯೋಗಿಸಬೇಕು. ಆ ನಿರ್ಮಾಲ್ಯವನ್ನು ಮುಂದೆ ತಿಳಿಸುವಂತೆ ಅಭಿಮಂತ್ರಣ ಮಾಡಬೇಕು. ನಿರ್ಮಾಲ್ಯವು ಸಿಗದಿರುವ ಪ್ರಸಂಗದಲ್ಲಿ ಅಭಿಮಂತ್ರಿತವಾದ ಜಲವನ್ನು ಪುಂಡ್ರಧಾರಣೆಗೆ ಉಪಯೋಗಿಸಬೇಕು.

### ೪೦. ಜಲಾಭಿಮಂತ್ರಣ

ಗಾಯತ್ರ್ಯಾ ವಾऽಥ ಮೂಲೇನ ಮಂತ್ರಯಿತ್ವಾ ಪ್ರಯತ್ನತಃ ।
ಗೃಹೀತ್ವಾ ದ್ವಾರಕಾಮೃತ್ಸ್ನಾಮಥವಾ ಪುಣ್ಯತೀರ್ಥಜಾಮ್ ॥

ಗಾಯತ್ರೀಮಂತ್ರದಿಂದ ಅಥವಾ ಅಷ್ಟಾಕ್ಷರಮಂತ್ರದಿಂದ ಕೈಯಲ್ಲಿ ಹಾಕಿಕೊಂಡ ಜಲವನ್ನು ಅಭಿಮಂತ್ರಿಸಬೇಕು. ಗೋಪೀಚಂದನವನ್ನು ಅಥವಾ ವಿಷ್ಣುಕ್ಷೇತ್ರದಲ್ಲಿಯ ಮೃತ್ತಿಕೆಯನ್ನು ತೆಗೆದುಕೊಂಡು ಮರ್ದನೆಮಾಡಬೇಕು.

### ೪೧. ಗೋಪೀಮರ್ದನ

ಸ್ಯೋನಾ ಪೃಥ್ವೀತಿ ಮಂತ್ರೇಣ ಗಾಯತ್ರ್ಯಾ ವಾ ಸಮಾಹಿತಃ ॥
ಅಥ ಮೂಲೇನ ಮಂತ್ರೇಣ ಮರ್ದಿತಾಂ ತಾಂ ಮೃದಂ ಪುನಃ ।
ಗಾಯತ್ರೀಮೂಲಮಂತ್ರಾಭ್ಯಾಂ ದಶಕೃತ್ವಸ್ತ್ರಿರೇವ ವಾ ॥
ಮಂತ್ರಯಿತ್ವಾ ತತೋ ಭಕ್ತ್ಯಾ ತಿಲಕಾನ್ ಧಾರಯೇತ್ ಸುಧೀಃ ॥

ಇತಿ ವಾರಾಹೇ ॥ ಸ.ದ

**ಇಮಂ ಮೇ ಗಂಗೇ ಇತಿ ಜಲಮಾದಾಯ, ವಿಷ್ಣೋರ್ನುಕಮಿತಿ ಮರ್ದಯೇತ್ । ಅತೋ ದೇವಾ ಅವಂತು ನಃ ಇತ್ಯೇತಾಭಿಃ ಋಗ್ಭಿಃ ವಿಷ್ಣುಗಾಯತ್ರ್ಯಾ ಚ ತ್ರಿವಾರಮಭಿಮಂತ್ರ್ಯ ಚ-**

ಮೇಲೆ ತಿಳಿಸಿದಂತೆ ಮೃತ್ತಿಕೆಯನ್ನು ಪ್ರಾರ್ಥನೆಮಾಡಿ, ಮಂತ್ರಪೂತವಾದ ಜಲದಲ್ಲಿ ಗೋಪೀಚಂದನವನ್ನು ಇರಿಸಬೇಕು.

''ಸ್ಯೋನಾ ಪೃಥಿವೀ'' ಎಂಬ ಮಂತ್ರದಿಂದ ಅಥವಾ ಗಾಯತ್ರೀಮಂತ್ರ-ದಿಂದ ಅಥವಾ ಅಷ್ಟಾಕ್ಷರಮಂತ್ರವನ್ನು ಪಠಿಸುತ್ತಾ ಗೋಪೀಚಂದನವನ್ನು ತೇಯಬೇಕು. ಈ ಸಮಯದಲ್ಲಿ ''ವಿಷ್ಣೋರ್ನು ಕಂ'' ಎಂಬ ಮಂತ್ರವನ್ನು ಕೂಡಾ ಪಠಿಸಬೇಕು.

''ಸ್ಯೋನಾ ಪೃಥಿವೀ'' ಎಂಬ ಮಂತ್ರದಿಂದ ಅಥವಾ ಗಾಯತ್ರೀಮಂತ್ರ-ದಿಂದ ಅಥವಾ ಮೂಲಮಂತ್ರವನ್ನು ಹತ್ತು ಬಾರಿ ಅಥವಾ ಮೂರುಬಾರಿ ಜಪಿಸುತ್ತಾ ತೇಯ್ದ ಗೋಪೀಚಂದನವನ್ನು ಅದೇ ಮಂತ್ರಗಳಿಂದ ಅಭಿಮಂತ್ರಣ ಮಾಡಬೇಕು. ಮತ್ತು ಅಭಿಮಂತ್ರಣ ಮಾಡುವಾಗ ''ಅತೋ ದೇವಾಃ'' ಎಂಬ ಮಂತ್ರವನ್ನು, ವಿಷ್ಣುಗಾಯತ್ರಿಯನ್ನು ಜಪಿಸಬೇಕು. ನಂತರ ಭಕ್ತಿಯಿಂದ ತಿಲಕಗಳನ್ನು ಧರಿಸಬೇಕು.

ವಿಷ್ಣುಪಾದಜಲದಿಂದ ಗೋಪೀಚಂದನವನ್ನು ತೇಯುವ ವಿಧಾನವನ್ನು ಪದ್ಮಪುರಾಣ ತಿಳಿಸಿದರೆ ಇದರ ಮುಂದಿನ ಕರ್ತವ್ಯವನ್ನು ವರಾಹಪುರಾಣ ತಿಳಿಸುತ್ತದೆ.

**೪೨. ಕೈಯಲ್ಲಿ ತೇಯ್ದು ಹಚ್ಚಿಕೊಳ್ಳಬೇಕು**

ಹಲವರು ಲಗುಬಗೆಯಿಂದ ಗೋಪೀಚಂದನಕ್ಕೇ ಬೆರಳನ್ನು ತಿಕ್ಕಿ ಪುಂಡ್ರವನ್ನು ಧರಿಸುತ್ತಾರೆ. ಆ ಪದ್ಧತಿ ಸರಿಯಾದುದಲ್ಲವೆಂಬ ವಿಚಾರವನ್ನು ಈ ವಚನ ತಿಳಿಸುತ್ತದೆ-

**ಯೋ ಮೃತ್ತಿಕಾಂ ದ್ವಾರವತೀಸಮುದ್ಭವಾಂ**
**ಕರೇ ಸಮಾದಾಯ ಲಲಾಟಮಧ್ಯೇ ।**

ಕರೋತಿ ನಿತ್ಯಂ ಪುರುಷೋರ್ಧ್ವಪುಂಡ್ರಂ
ಕ್ರಿಯಾಫಲಂ ಕೋಟಿಗುಣಂ ಸದಾ ಭವೇತ್ ॥

ದ್ವಾರವತೀಸಮುದ್ಭೂತವಾದ ಮೃತ್ತಿಕೆಯನ್ನು ಕೈಯಲ್ಲಿ ತೇಯಬೇಕು. ಅದನ್ನು ಸರಿಯಾಗಿ ಹಣೆಯ ಮಧ್ಯಭಾಗದಲ್ಲಿ ಧರಿಸಬೇಕು. ಹೀಗೆ ನಿತ್ಯವೂ ಆಚರಿಸಬೇಕು. ಇದರಿಂದ ತಾನು ಮಾಡಿದ ಕರ್ಮವು ಅತಿಶಯವಾದ ಪುಣ್ಯವನ್ನು ತಂದುಕೊಡುತ್ತದೆ.

**೪೩. ಉಗುರಿನ ಸಂಪರ್ಕವಾಗಬಾರದು**

ಅಂಗುಷ್ಠಃ ಪುಷ್ಟಿದಃ ಪ್ರೋಕ್ತೋ ಮಧ್ಯಮಾಯುಷ್ಕರೀ ಭವೇತ್ ।
ಅನಾಮಿಕಾನ್ನದಾ ನಿತ್ಯಂ ಮುಕ್ತಿದಾ ಚ ಪ್ರದೇಶಿನೀ ॥
ಏತೈರಂಗುಷ್ಠಭೇದಸ್ತು ಕಾರಯೇನ್ನ ನಖೈಃ ಸ್ಪೃಶೇತ್ ॥ ಬ್ರಹ್ಮಾಂಡೇ

ಪುಷ್ಟಿಕಾಮನಾದವನು ಅಂಗುಷ್ಠದಿಂದ ಪುಂಡ್ರವನ್ನು ಧರಿಸಬೇಕು. ಆಯುಷ್ಯವನ್ನು ಬಯಸುವವನು ಮಧ್ಯದ ಅಂಗುಲಿಯಿಂದ ಪುಂಡ್ರವನ್ನು ಧರಿಸಬೇಕು. ಅನ್ನವನ್ನು ಪ್ರಾರ್ಥಿಸುವವನು ಅನಾಮಿಕಾಂಗುಲಿಯಿಂದ ಪುಂಡ್ರವನ್ನು ಧರಿಸಬೇಕು. ಮುಕ್ತಿಕಾಮುಕನಾದವನು ತರ್ಜನೀಯಿಂದ ಪುಂಡ್ರವನ್ನು ಧರಿಸಬೇಕು. ಮುಕ್ತಿಯ ಬಯಕೆಯಿಂದ ಕರ್ಮವನ್ನು ಮಾಡುವುದು ಶ್ರೇಯಸ್ಕರವಾಗಿದೆ. ಆದ್ದರಿಂದ ತರ್ಜನಿಯಿಂದ ಪುಂಡ್ರವನ್ನು ಧರಿಸುವ ಪದ್ಧತಿ ಸಂಪ್ರದಾಯಾಗತವಾಗಿ ಬಂದಿದೆ. ಯಾವುದೇ ಕಾರಣದಿಂದ ಗೋಪೀಚಂದನಕ್ಕೆ ಉಗುರಿನ ಸಂಪರ್ಕವಾಗಬಾರದು. ಈ ವಿಷಯದಲ್ಲಿ ಪ್ರಯತ್ನಶೀಲನಾಗಬೇಕು.

ಹಣೆಯಮೇಲೆ ದಂಡಾಕಾರವಾಗಿ, ಹೃದಯದಲ್ಲಿ ಪದ್ಮದ ಮೊಗ್ಗಿನ ಆಕಾರದಲ್ಲಿ, ಬಾಹುಗಳಲ್ಲಿ ಬಿದಿರಿನ ಎಲೆಯಂತೆ, ಉಳಿದ ನಾಮಗಳನ್ನು ದೀಪದ ಆಕಾರದಲ್ಲಿ ಹಚ್ಚಿಕೊಳ್ಳಬೇಕು.

**೪೪. ಪುಂಡ್ರ ಧರಿಸುವಾಗ ದ್ವಾದಶನಾಮಗಳ ಆವಶ್ಯಕತೆ**

ದ್ವಾದಶನಾಮಗಳ ಅರ್ಥಾನುಸಂಧಾನವನ್ನು ಮಾಡುತ್ತಾ ಪುಂಡ್ರವನ್ನು ಧರಿಸುವುದು ವಿಶೇಷವಾದ ಪುಣ್ಯಕ್ಕೆ ಕಾರಣವಾಗಿದೆ. ಈ ವಿಷಯವನ್ನು ತಿಳಿಸುವ ಶಾಂಡಿಲ್ಯರ ವಚನವಿದಾಗಿದೆ-

ಪಾಠಯೇದ್ದ್ವಾದಶನಾಮ್ನಾಂ ತತ್ತತ್ಸ್ಥಾನೇಷು ಯೋ ದ್ವಿಜಃ ।
ಭವೇತ್ಸ್ನಾನಫಲಂ ತಸ್ಯ ಮೃದಾ ತತ್ರ ದಿನೇ ದಿನೇ ॥ ಶಾಂ.ಸ್ಮೃ

ಬ್ರಾಹ್ಮಣನು ದ್ವಾದಶಾಂಗಗಳಲ್ಲಿ ಕ್ಷತ್ರಿಯನು ನಾಲ್ಕು ಅವಯವಗಳಲ್ಲಿ ವೈಶ್ಯನು ಎರಡು ಅಂಗಗಳಲ್ಲಿ ಪುಂಡ್ರವನ್ನು ಧರಿಸಬೇಕೆಂದು ಈಗಾಗಲೇ ತಿಳಿದಿದ್ದೇವೆ. ಬ್ರಾಹ್ಮಣನಾದವನು ದ್ವಾದಶ ಅವಯವಗಳಲ್ಲಿ ಪುಂಡ್ರವನ್ನು ಧರಿಸುವಾಗ ಭಗವಂತನ ದ್ವಾದಶನಾಮಗಳನ್ನು ಪಠಿಸಬೇಕು. ಹೀಗೆ ಮಾಡುವುದರಿಂದ ಸ್ನಾನಮಾಡಿದ ಫಲವು ಅನಾಯಾಸವಾಗಿ ಬಂದೊದಗುತ್ತದೆ.

ಅರ್ಥಾತ್ ರೋಗಾದಿಗಳಿಂದ ಪೀಡಿತನಾಗಿ ಸ್ನಾನ ಮಾಡುವ ಶಕ್ತಿಇಲ್ಲದಿರುವಾಗ ಗೋಪೀಚಂದನದಿಂದ ಪುಂಡ್ರವನ್ನು ಧರಿಸಿದರೆ ಸಾಕು. ಅವನಿಗೆ ಸ್ನಾನಮಾಡಿದ ಪುಣ್ಯವು ಬಂದೊದಗುತ್ತದೆ.

**೪೫. ಧಾರಣಕ್ರಮ-ನಾಮಚಿಂತನೆ**

ಪುಂಡ್ರವನ್ನು ಧರಿಸುವಾಗ ಭಗವಂತನ ವಿಶಿಷ್ಟವಾದ ದ್ವಾದಶಮೂರ್ತಿ-ಗಳನ್ನು ಚಿಂತಿಸಬೇಕು. ಆ ಕ್ರಮವನ್ನು ಬ್ರಹ್ಮಪುರಾಣ ಈ ರೀತಿಯಾಗಿ ತಿಳಿಸುತ್ತದೆ.

ಲಲಾಟೇ ಕೇಶವಂ ಧ್ಯಾಯೇನ್ನಾರಾಯಣಮಥೋದರೇ ।
ವಕ್ಷಃಸ್ಥಲೇ ಮಾಧವಂ ಚ ಗೋವಿಂದಂ ಕಂಠಕೂಬರೇ ॥

ವಿಷ್ಣುಂ ಚ ದಕ್ಷಿಣೇ ಕುಕ್ಷೌ ಬಾಹುಕೇ ಮಧುಸೂದನಮ್ ।
ತ್ರಿವಿಕ್ರಮಂ ಕಂಧರೇ ತು ವಾಮನಂ ವಾಮಪಾರ್ಶ್ವಕೇ ॥

ಶ್ರೀಧರಂ ವಾಮಕೇ ಬಾಹೌ ತು ಹೃಷೀಕೇಶಂ ತು ಕಂಧರೇ ।
ಪೃಷ್ಠೇ ತು ಪದ್ಮನಾಭಂ ಚ ಕಕುದ್ದಾಮೋದರಂ ನ್ಯಸೇತ್ ॥
ತತ್ಪ್ರಕ್ಷಾಲಿತತೋಯೇನ ವಾಸುದೇವೇತಿ ಮೂರ್ಧನಿ ॥

ದ್ವಾದಶೈತಾನಿ ನಾಮಾನಿ ವಾಸುದೇವೇತಿ ಮೂರ್ಧನಿ ।
ಸಂಕರ್ಷಣಾದಿಭಿಃ ಕೃಷ್ಣೇ ಶುಕ್ಲೇ ಚೇತ್ಕೇಶವಾದಿಭಿಃ ॥ ಬ್ರಹ್ಮ.ಪು

| | ಸ್ಥಾನ | ಶುಕ್ಲಪಕ್ಷ | ಕೃಷ್ಣಪಕ್ಷ |
|---|---|---|---|
| 1. | ಹಣೆಯಲ್ಲಿ | ಕೇಶವ | ಸಂಕರ್ಷಣ |
| 2. | ಉದರದ ಮಧ್ಯದಲ್ಲಿ | ನಾರಾಯಣ | ವಾಸುದೇವ |
| 3. | ಎದೆಯ ಮೇಲೆ | ಮಾಧವ | ಪ್ರದ್ಯುಮ್ನ |
| 4. | ಕಂಠದಮೇಲೆ | ಗೋವಿಂದ | ಅನಿರುದ್ಧ |
| 5. | ಹೊಟ್ಟೆಯ ಬಲಭಾಗ | ವಿಷ್ಣು | ಪುರುಷೋತ್ತಮ |
| 6. | ಬಲ ಭುಜದ ಮೇಲೆ | ಮಧುಸೂದನ | ಅಧೋಕ್ಷಜ |
| 7. | ಕಂಠದ ಬಲಭಾಗದಲ್ಲಿ | ತ್ರಿವಿಕ್ರಮ | ನಾರಸಿಂಹ |
| 8. | ಉದರದ ಎಡಭಾಗದಲ್ಲಿ | ವಾಮನ | ಅಚ್ಯುತ |
| 9. | ಎಡ ಭುಜದ ಮೇಲೆ | ಶ್ರೀಧರ | ಜನಾರ್ದನ |
| 10. | ಕಂಠದ ಎಡ ಭಾಗದಲ್ಲಿ | ಹೃಷೀಕೇಶ | ಉಪೇಂದ್ರ |
| 11. | ಬೆನ್ನಿನ ಹಿಂಭಾಗದಲ್ಲಿ | ಪದ್ಮನಾಭ | ಹರಿ |
| 12. | ಕಂಠದ ಹಿಂಭಾಗದಲ್ಲಿ | ದಾಮೋದರ | ಶ್ರೀಕೃಷ್ಣ |
| 13. | ಬಲಭಾಗದ ಸ್ತನದಮೇಲೆ | ಶ್ರೀವತ್ಸ | -- |
| 14. | ತಲೆಯ ಮೇಲೆ | ವಾಸುದೇವ | -- |

ಹೀಗೆ ಶುಕ್ಲಪಕ್ಷದಲ್ಲಿ ಕೇಶವಾದಿ ದಾಮೋದರಾಂತವಾದ ನಾಮಗಳಿಂದ ಕೃಷ್ಣಪಕ್ಷದಲ್ಲಿ ಹೃಷೀಕೇಶಾದಿ ಶ್ರೀಕೃಷ್ಣನಾಮಗಳಿಂದ ದ್ವಾದಶಪುಂಡ್ರಗಳನ್ನು ಇದೇ ಕ್ರಮದಲ್ಲಿಯೇ ಬ್ರಾಹ್ಮಣರು ಧರಿಸಬೇಕು.

### ೪೬. ಮೂರು ಹೊತ್ತೂ ಪುಂಡ್ರಧಾರಣೆ

ತ್ರಿಷವಣಸ್ನಾನ ಮಾಡುವವರೆಲ್ಲರೂ ಮೂರು ಹೊತ್ತಿನಲ್ಲಿಯೂ ಪುಂಡ್ರವನ್ನು ಧರಿಸಬೇಕೆಂಬ ವಿಷಯವನ್ನು ಫಲೋಕ್ತಿಪೂರ್ವಕವಾಗಿ ಭರದ್ವಾಜಸಂಹಿತೆಯು ತಿಳಿಸುತ್ತದೆ. ಆ ವಚನಗಳಿವಾಗಿವೆ-

ಪ್ರಾತರ್ಮಾಧ್ಯಂದಿನೇ ಸಾಯಮೂರ್ಧ್ವಪುಂಡ್ರೇಣ ಕೇಶವಃ ।
ಅಕೃತೈರ್ವಾಪಿ ಸುಕೃತೈಃ ತೈಸ್ತೈಃ ಪ್ರೀಣಾತಿ ಕರ್ಮಭಿಃ ॥

ಪ್ರಭಾತೇ ದಿವ್ಯಲೋಕಸ್ಥಂ ಮಧ್ಯಾಹ್ನೇ ಚಾರ್ಕಮಧ್ಯಗಮ್ ।
ತೋಷಯನ್ನೂರ್ಧ್ವಪುಂಡ್ರೇಣ ಸಾಯಂ ಸ್ವಾತ್ಮಗತಂ ಹರಿಮ್ ॥ಭ.ಸಂ

ಪ್ರಾತಃಕಾಲದಲ್ಲಿ ಮಧ್ಯಾಹ್ನಕಾಲದಲ್ಲಿ ಮತ್ತು ಸಾಯಂಕಾಲದಲ್ಲಿ ಊರ್ಧ್ವಪುಂಡ್ರಗಳಿಂದ ದೇಹವನ್ನು ಅಲಂಕರಿಸಿಕೊಳ್ಳಬೇಕು. ಹೀಗೆ ಪುಂಡ್ರವನ್ನು ಧರಿಸಿ ಅಲ್ಪವಾದ ಕರ್ಮಗಳನ್ನು ಆಚರಿಸಿದರೂ ಸರಿ ಕೇಶವಾದಿರೂಪಿಯಾದ ಪರಮಾತ್ಮನು ಪ್ರೀತನಾಗುತ್ತಾನೆ. ಪುಂಡ್ರವನ್ನು ಧರಿಸದೇ ವಿಶೇಷವಾದ ಸುಕೃತಗಳನ್ನು ಮಾಡಿದರೂ ಪರಮಾತ್ಮ ಆ ಸುಕೃತಗಳಿಗೆ ಫಲವನ್ನು ನೀಡುವುದಿಲ್ಲವೆಂದು ಇದರ ಅಭಿಪ್ರಾಯ.

### ೪೭. ಜಾತಿಗೆ ಅನುಗುಣವಾಗಿ ಪುಂಡ್ರಗಳ ಸಂಖ್ಯೆ

ಜಾತಿ-ಲಿಂಗಗಳ ಭೇದವಿಲ್ಲದೇ ಊರ್ಧ್ವಪುಂಡ್ರವನ್ನು ಧರಿಸಬೇಕೆಂಬುದನ್ನು ತಿಳಿದಿದ್ದೇವೆ. ಪುಂಡ್ರವನ್ನು ಧರಿಸುವ ವಿಷಯದಲ್ಲಿ ವಿಶೇಷವಿಲ್ಲದಿದ್ದರೂ ಸಂಖ್ಯೆಯಲ್ಲಿಯ ವಿಶೇಷವನ್ನು ಪರಾಶರಸ್ಮೃತಿ ತಿಳಿಸುತ್ತದೆ-

ಕುರ್ಯಾದ್ದ್ವಾದಶಪುಂಡ್ರಾಣಿ ವಿಪ್ರಶ್ಚತ್ವಾರಿ ಬಾಹುಜಃ ।
ವೈಶ್ಯಃ ಪುಂಡ್ರದ್ವಯಂ ಕುರ್ಯಾಚ್ಛೂದ್ರಾದ್ಯಾ ಅಪರೇಽಖಿಲಾಃ ॥

ವೇದಾನಧಿಕೃತಾ ಯೇ ತು ಸರ್ವೇಷಾಮಪಿ ಯೋಷಿತಃ ।
ಏಕಮೇವ ಪ್ರಕುರ್ವೀರನ್ ಲಲಾಟೇ ತೂರ್ಧ್ವಪುಂಡ್ರಕಮ್ ॥

ಆ.ಕೌ.ಪ.ಸ್ಮೃ

ಬ್ರಾಹ್ಮಣರು ಹನ್ನೆರಡು ಸ್ಥಳಗಳಲ್ಲಿ ಪುಂಡ್ರವನ್ನು ಧರಿಸಬೇಕು. ಕ್ಷತ್ರಿಯನು ನಾಲ್ಕು ಪುಂಡ್ರಗಳನ್ನು ಧರಿಸಬೇಕು. ವೈಶ್ಯನು ಎರಡು ಪುಂಡ್ರಗಳನ್ನು ಧರಿಸಬೇಕು. ವೇದಾಧಿಕಾರವಿಲ್ಲದ ಶೂದ್ರರು ಮತ್ತು ಸಂಕರಜಾತಿಯವರೆಲ್ಲರೂ ಎಲ್ಲ ಜಾತಿಯ ಮಹಿಳೆಯರು ಲಲಾಟದಲ್ಲಿ ಮಾತ್ರ ಒಂದು ಊರ್ಧ್ವಪುಂಡ್ರವನ್ನು ಧರಿಸಬೇಕು.

### ೪೮. ಜಾತಿ-ಲಿಂಗಗಳಿಗೆ ಅನುಗುಣವಾಗಿ ಪುಂಡ್ರವನ್ನು ಧರಿಸಬೇಕಾದ ಸ್ಥಾನಗಳು

ಜಾತಿ-ಲಿಂಗಗಳ ಭೇದವಿಲ್ಲದೇ ಪುಂಡ್ರಗಳನ್ನು ಧರಿಸಬೇಕು. ಆದರೆ ಆ ಸಂಖ್ಯೆಯಲ್ಲಿ ವಿಶೇಷವಿದೆ. ಆ ಸಂಖ್ಯೆಯ ವಿಶೇಷವನ್ನೂ ಪರಾಶರಸ್ಮೃತಿ ತಿಳಿಸಿದೆ.

| | ಸ್ಥಾನ | ಶುಕ್ಲಪಕ್ಷ | ಕೃಷ್ಣಪಕ್ಷ |
|---|---|---|---|
| 1. | ಹಣೆಯಲ್ಲಿ | ಕೇಶವ | ಸಂಕರ್ಷಣ |
| 2. | ಉದರದ ಮಧ್ಯದಲ್ಲಿ | ನಾರಾಯಣ | ವಾಸುದೇವ |
| 3. | ಎದೆಯ ಮೇಲೆ | ಮಾಧವ | ಪ್ರದ್ಯುಮ್ನ |
| 4. | ಕಂಠದಮೇಲೆ | ಗೋವಿಂದ | ಅನಿರುದ್ಧ |
| 5. | ಹೊಟ್ಟೆಯ ಬಲಭಾಗ | ವಿಷ್ಣು | ಪುರುಷೋತ್ತಮ |
| 6. | ಬಲ ಭುಜದ ಮೇಲೆ | ಮಧುಸೂದನ | ಅಧೋಕ್ಷಜ |
| 7. | ಕಂಠದ ಬಲಭಾಗದಲ್ಲಿ | ತ್ರಿವಿಕ್ರಮ | ನಾರಸಿಂಹ |
| 8. | ಉದರದ ಎಡಭಾಗದಲ್ಲಿ | ವಾಮನ | ಅಚ್ಯುತ |
| 9. | ಎಡ ಭುಜದ ಮೇಲೆ | ಶ್ರೀಧರ | ಜನಾರ್ದನ |
| 10. | ಕಂಠದ ಎಡ ಭಾಗದಲ್ಲಿ | ಹೃಷೀಕೇಶ | ಉಪೇಂದ್ರ |
| 11. | ಬೆನ್ನಿನ ಹಿಂಭಾಗದಲ್ಲಿ | ಪದ್ಮನಾಭ | ಹರಿ |
| 12. | ಕಂಠದ ಹಿಂಭಾಗದಲ್ಲಿ | ದಾಮೋದರ | ಶ್ರೀಕೃಷ್ಣ |
| 13. | ಬಲಭಾಗದ ಸ್ತನದಮೇಲೆ | ಶ್ರೀವತ್ಸ | -- |
| 14. | ತಲೆಯ ಮೇಲೆ | ವಾಸುದೇವ | -- |

ಹೀಗೆ ಶುಕ್ಲಪಕ್ಷದಲ್ಲಿ ಕೇಶವಾದಿ ದಾಮೋದರಾಂತವಾದ ನಾಮಗಳಿಂದ ಕೃಷ್ಣಪಕ್ಷದಲ್ಲಿ ಹೃಷೀಕೇಶಾದಿ ಶ್ರೀಕೃಷ್ಣನಾಮಗಳಿಂದ ದ್ವಾದಶಪುಂಡ್ರಗಳನ್ನು ಇದೇ ಕ್ರಮದಲ್ಲಿಯೇ ಬ್ರಾಹ್ಮಣರು ಧರಿಸಬೇಕು.

**೪೬. ಮೂರು ಹೊತ್ತೂ ಪುಂಡ್ರಧಾರಣೆ**

ತ್ರಿಷವಣಸ್ನಾನ ಮಾಡುವವರೆಲ್ಲರೂ ಮೂರು ಹೊತ್ತಿನಲ್ಲಿಯೂ ಪುಂಡ್ರವನ್ನು ಧರಿಸಬೇಕೆಂಬ ವಿಷಯವನ್ನು ಫಲೋಕ್ತಿಪೂರ್ವಕವಾಗಿ ಭರದ್ವಾಜಸಂಹಿತೆಯು ತಿಳಿಸುತ್ತದೆ. ಆ ವಚನಗಳಿವಾಗಿವೆ-

ಪ್ರಾತರ್ಮಾಧ್ಯಂದಿನೇ ಸಾಯಮೂರ್ಧ್ವಪುಂಡ್ರೇಣ ಕೇಶವಃ ।
ಅಕೃತೈರ್ವಾಪಿ ಸುಕೃತೈಃ ತೈಸ್ತೈಃ ಪ್ರೀಣಾತಿ ಕರ್ಮಭಿಃ ॥

ಪ್ರಭಾತೇ ದಿವ್ಯಲೋಕಸ್ಥಂ ಮಧ್ಯಾಹ್ನೇ ಚಾರ್ಕಮಧ್ಯಗಮ್ ।
ತೋಷಯನ್ನೂರ್ಧ್ವಪುಂಡ್ರೇಣ ಸಾಯಂ ಸ್ವಾತ್ಮಗತಂ ಹರಿಮ್ ॥ಭ.ಸಂ

ಪ್ರಾತಃಕಾಲದಲ್ಲಿ ಮಧ್ಯಾಹ್ನಕಾಲದಲ್ಲಿ ಮತ್ತು ಸಾಯಂಕಾಲದಲ್ಲಿ ಊರ್ಧ್ವಪುಂಡ್ರಗಳಿಂದ ದೇಹವನ್ನು ಅಲಂಕರಿಸಿಕೊಳ್ಳಬೇಕು. ಹೀಗೆ ಪುಂಡ್ರವನ್ನು ಧರಿಸಿ ಅಲ್ಪವಾದ ಕರ್ಮಗಳನ್ನು ಆಚರಿಸಿದರೂ ಸರಿ ಕೇಶವಾದಿರೂಪಿಯಾದ ಪರಮಾತ್ಮನು ಪ್ರೀತನಾಗುತ್ತಾನೆ. ಪುಂಡ್ರವನ್ನು ಧರಿಸದೇ ವಿಶೇಷವಾದ ಸುಕೃತಗಳನ್ನು ಮಾಡಿದರೂ ಪರಮಾತ್ಮ ಆ ಸುಕೃತಗಳಿಗೆ ಫಲವನ್ನು ನೀಡುವುದಿಲ್ಲವೆಂದು ಇದರ ಅಭಿಪ್ರಾಯ.

### ೪೭. ಜಾತಿಗೆ ಅನುಗುಣವಾಗಿ ಪುಂಡ್ರಗಳ ಸಂಖ್ಯೆ

ಜಾತಿ-ಲಿಂಗಗಳ ಭೇದವಿಲ್ಲದೇ ಊರ್ಧ್ವಪುಂಡ್ರವನ್ನು ಧರಿಸಬೇಕೆಂಬುದನ್ನು ತಿಳಿದಿದ್ದೇವೆ. ಪುಂಡ್ರವನ್ನು ಧರಿಸುವ ವಿಷಯದಲ್ಲಿ ವಿಶೇಷವಿಲ್ಲದಿದ್ದರೂ ಸಂಖ್ಯೆಯಲ್ಲಿಯ ವಿಶೇಷವನ್ನು ಪರಾಶರಸ್ಮೃತಿ ತಿಳಿಸುತ್ತದೆ-

ಕುರ್ಯಾದ್ದ್ವಾದಶಪುಂಡ್ರಾಣಿ ವಿಪ್ರಶ್ಚತ್ವಾರಿ ಬಾಹುಜಃ ।
ವೈಶ್ಯಃ ಪುಂಡ್ರದ್ವಯಂ ಕುರ್ಯಾಚ್ಛೂದ್ರಾದ್ಯಾ ಅಪರೇಽಖಿಲಾಃ ॥

ವೇದಾನಧಿಕೃತಾ ಯೇ ತು ಸರ್ವೇಷಾಮಪಿ ಯೋಷಿತಃ ।
ಏಕಮೇವ ಪ್ರಕುರ್ವೀರನ್ ಲಲಾಟೇ ತೂರ್ಧ್ವಪುಂಡ್ರಕಮ್ ॥

ಆ.ಕೌ.ಪ.ಸ್ಮೃ

ಬ್ರಾಹ್ಮಣರು ಹನ್ನೆರಡು ಸ್ಥಳಗಳಲ್ಲಿ ಪುಂಡ್ರವನ್ನು ಧರಿಸಬೇಕು. ಕ್ಷತ್ರಿಯನು ನಾಲ್ಕು ಪುಂಡ್ರಗಳನ್ನು ಧರಿಸಬೇಕು. ವೈಶ್ಯನು ಎರಡು ಪುಂಡ್ರಗಳನ್ನು ಧರಿಸಬೇಕು. ವೇದಾಧಿಕಾರವಿಲ್ಲದ ಶೂದ್ರರು ಮತ್ತು ಸಂಕರಜಾತಿಯವರೆಲ್ಲರೂ ಎಲ್ಲ ಜಾತಿಯ ಮಹಿಳೆಯರು ಲಲಾಟದಲ್ಲಿ ಮಾತ್ರ ಒಂದು ಊರ್ಧ್ವಪುಂಡ್ರವನ್ನು ಧರಿಸಬೇಕು.

### ೪೮. ಜಾತಿ-ಲಿಂಗಗಳಿಗೆ ಅನುಗುಣವಾಗಿ ಪುಂಡ್ರವನ್ನು ಧರಿಸಬೇಕಾದ ಸ್ಥಾನಗಳು

ಜಾತಿ-ಲಿಂಗಗಳ ಭೇದವಿಲ್ಲದೇ ಪುಂಡ್ರಗಳನ್ನು ಧರಿಸಬೇಕು. ಆದರೆ ಆ ಸಂಖ್ಯೆಯಲ್ಲಿ ವಿಶೇಷವಿದೆ. ಆ ಸಂಖ್ಯೆಯ ವಿಶೇಷವನ್ನೂ ಪರಾಶರಸ್ಮೃತಿ ತಿಳಿಸಿದೆ.

ಪ್ರಸ್ತುತ ಸ್ಥಳವಿಶೇಷವನ್ನು ತಿಳಿಸುತ್ತದೆ. ಆ ಪುಂಡ್ರಗಳಿಗೆ ತಕ್ಕುದಾದ ಸ್ಥಾನಗಳಾವು ಎಂಬುದನ್ನು ಪರಾಶರಸ್ಮೃತಿ ತಿಳಿಸುತ್ತದೆ.

ಲಲಾಟೇ ಹೃದಯೇ ವೈಶ್ಯೋ ಬಾಹ್ವೋರಪಿ ಚ ಬಾಹುಜಃ ।

ವೈಶ್ಯನು ಹಣೆಯ ಮೇಲೆ ಮತ್ತು ಹೃದಯದಲ್ಲಿ ಹೀಗೆ ಎರಡು ಸ್ಥಾನಗಳಲ್ಲಿ ಪುಂಡ್ರವನ್ನು ಧರಿಸಬೇಕು. ಕ್ಷತ್ರಿಯನು ಹಣೆಯಲ್ಲಿ, ಹೃದಯದಲ್ಲಿ, ಮತ್ತು ಎರಡು ಬಾಹುಗಳಲ್ಲಿ ಹೀಗೆ ನಾಲ್ಕು ಸ್ಥಳಗಳಲ್ಲಿ ಪುಂಡ್ರವನ್ನು ಧರಿಸಬೇಕು.

...ಸ್ಥಾನದ್ವಾದಶಕೇ ವಿಪ್ರಃ ಪುಂಡ್ರಾಣಿ ಧಾರಯೇತ್ ॥ ಆ.ಕೌ.ಪ.ಸ್ಮೃ

ದ್ವಾದಶಸ್ಥಾನಗಳಲ್ಲಿ ಪುಂಡ್ರಗಳನ್ನು ವಿಪ್ರರು ಧರಿಸಬೇಕು.

ಲಲಾಟೇ ಹೃದಿ ಬಾಹ್ವೋಶ್ಚ ಚತುಃ ಪುಂಡ್ರಾಣಿ ಧಾರಯೇತ್ ।
ಮೂರ್ತಯೋ ವಾಸುದೇವಾದ್ಯಾಶ್ಚತುಃ ಪುಂಡ್ರಾಣಿ ಧಾರಯೇತ್ ॥

ಹಣೆಯಮೇಲೆ, ಹೃದಯದಲ್ಲಿ, ಎರಡು ಬಾಹುಗಳಲ್ಲಿ ಹೀಗೆ ನಾಲ್ಕು ಸ್ಥಳಗಳಲ್ಲಿ ಕ್ಷತ್ರಿಯರು ಪುಂಡ್ರಗಳನ್ನು ಧರಿಸಬೇಕು. ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ಚತುರ್ಮೂರ್ತಿಗಳನ್ನು ಧ್ಯಾನಿಸಬೇಕು.

ಲಲಾಟೇ ಕೇಶವಂ ಧ್ಯಾಯೇತ್ ಹೃದಯೇ ಮಾಧವಃ ಸ್ಮೃತಃ ॥
ಯೋಷಿಚ್ಛೂದ್ರಃ ಸ್ಮರೇದ್ದೇವಂ ಕೇಶವಂ ಫಾಲದೇಶಕೇ ।
ಅನೇನ ವಿಧಿನಾ ಕುರ್ಯಾತ್ ಪುಂಡ್ರಾಣಿ ಮಮ ತುಷ್ಟಯೇ ॥

ಸ್ಮೃ.ಮಾ.ಸಂ

ವೈಶ್ಯರು ಲಲಾಟದಲ್ಲಿ ಕೇಶವನನ್ನು ಚಿಂತಿಸುತ್ತಾ, ಹೃದಯದಲ್ಲಿ ಮಾಧವನನ್ನು ಸ್ಮರಿಸುತ್ತಾ, ಪುಂಡ್ರಗಳನ್ನು ಧರಿಸಬೇಕು. ಎಲ್ಲಜಾತಿಯ ಸ್ತ್ರೀಯರು ಕೇಶವನನ್ನು ಸ್ಮರಿಸುತ್ತಾ ಹಣೆಯ ಮೇಲೆ ಪುಂಡ್ರವನ್ನು ಧರಿಸಬೇಕು. ಹೀಗೆ ಧರಿಸುವುದರಿಂದ ನನಗೆ ಸಂತೋಷವಾಗುತ್ತದೆ. ಆ ವ್ಯಕ್ತಿಯನ್ನು ನಾನು ಅನುಗ್ರಹಿಸುತ್ತೇನೆ.

### ೪೯. ಮಂತ್ರವನ್ನು ಉಚ್ಚರಿಸುವ ಕ್ರಮ

ವಿಪ್ರಾಣಾಂ ಕ್ಷತ್ರಿಯಾಣಾಂ ಚ ಪ್ರಣವಾದಿನಮೋಽಂತಕಃ ।
ಸುವಾಸಿನೀನಾಂ ವೈಶ್ಯಾನಾಂ ಕೇಶವಾದಿನಮೋಽಂತಕಮ್ ।
ಶೂದ್ರಾಣಾಂ ವಿಧವಾನಾಂ ಚ ನಾಮಮಾತ್ರಂ ವಿಧೀಯತೇ ॥

ಬ್ರಾಹ್ಮಣರು ಮತ್ತು ಕ್ಷತ್ರಿಯರು ಪ್ರಣವಪೂರ್ವಕವಾದ ನಮೋಽಂತವಾದ ಕೇಶವಾದಿಮಂತ್ರಗಳನ್ನು ಉಚ್ಚರಿಸುತ್ತಾ (ಓಂ ಕೇಶವಾಯ ನಮಃ) ಪುಂಡ್ರಗಳನ್ನು ಧರಿಸಬೇಕು.

ವೈಶ್ಯರು ಮತ್ತು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಜಾತಿಯ ಸುವಾಸಿನೀಸ್ತ್ರೀಯರು ಕೇಶವಾದಿ ನಮೋಽಂತವಾದ ಕೇಶವಾದಿಮಂತ್ರಗಳನ್ನು (ಕೇಶವಾಯ ನಮಃ) ಪಠಿಸುತ್ತಾ ಪುಂಡ್ರವನ್ನು ಧರಿಸಬೇಕು. ಶೂದ್ರರು ಮತ್ತು ವಿಧವಾಸ್ತ್ರೀಯರು ನಮಃ ಎಂಬ ಶಬ್ದವನ್ನು ಉಚ್ಚರಿಸದೇ ಕೇವಲ ಕೇಶವ ಎಂಬ ನಾಮಮಂತ್ರದಿಂದ ಪುಂಡ್ರವನ್ನು ಧರಿಸಬೇಕು.

**೫೦. ಧಾರಣಯೋಗ್ಯಕಾಲ**

ತೈಲಾಭ್ಯಂಗೇ ವಿವಾಹೇ ಚ ಸೂತಕೇ ಮೃತಕೇಽಪಿ ಚ ।
ಗೋಪೀಮೃದಂ ಧಾರಯೇದ್ಯಃ ನೈವ ಯಾತಿ ಯಮಾಲಯಮ್ ॥

ಯಮಃ, ಪ್ರಕಾಶಿಕಾ

ತೈಲಾಭ್ಯಂಗಮಾಡುವಾಗ, ವಿವಾಹ ಪ್ರಸಂಗದಲ್ಲಿ, ಸೂತಕವಿರುವಾಗ, ಮೃತಾಶೌಚದಲ್ಲಿ ಯಾವುದೇ ಕಾಲದಲ್ಲಿಯೂ ಮೃತ್ತಿಕೆಯಿಂದ ಶೋಭಿತನಾಗಿ ಮನುಷ್ಯನಿರಬೇಕು. ಅವನಿಗೆ ನರಕವಾಗುವುದಿಲ್ಲ.

**೫೧. ಸ್ನಾನಮಾಡದಿರುವಾಗಲೂ ಧರಿಸಬಹುದು**

ಗೋಪೀಚಂದನವನ್ನು ಸ್ನಾನಮಾಡಿದ ಮೇಲೆಯೇ ಧರಿಸಬೇಕೆಂದು ಹಲವರು ತಿಳಿದಿರುತ್ತಾರೆ. ಹಾಗೇನೂ ನಿಯಮವಿಲ್ಲ. ಇದಕ್ಕೆ ವಿಪರೀತವಾದ ನಿಯಮವಿದಾಗಿದೆ. ಪದ್ಮಪುರಾಣ ತಿಳಿಸುವ ಅತಿ ಅಪರೂಪವಾದ ವಿಷಯವಿದಾಗಿದೆ-

ಅಸ್ನಾತೋ ಯಃ ಕ್ರಿಯಾಂ ಕುರ್ಯಾದಶುಚಿಃ ಪಾಪಶಂಕಿತಃ ।
ಪೂತಃ ಸದ್ಯೋ ಭವೇನ್ನಿತ್ಯಂ ಗೋಪೀಚಂದನಧಾರಣಾತ್ ॥ ಪ.ಪು

ಸ್ನಾನಮಾಡದೇ ಹಲವು ಸಲ ಪಾಠ-ಪ್ರವಚನಾದಿಕರ್ಮಗಳನ್ನು ಆಚರಿಸುವ ಪ್ರಸಂಗ ಬರುತ್ತದೆ. ಇಂತಹ ಪ್ರಸಂಗದಲ್ಲಿಯೂ ಅವಶ್ಯವಾಗಿ ಗೋಪೀಚಂದನ-ವನ್ನು ಧರಿಸಬೇಕು. ಇದರಿಂದ ಕರ್ಮ ಸಫಲವಾಗುತ್ತದೆ. ತಾನು ಅಶುಚಿಯಾದಾಗ

ಮತ್ತು ಪಾಪ ಮಾಡಿದ್ದೇನೆಂಬ ಶಂಕೆ ಬಂದಾಗ ಸದ್ಯದಲ್ಲಿಯೇ ಗೋಪೀಚಂದನ-ವನ್ನು ಧರಿಸುವ ಮಾತ್ರಕ್ಕೆ ಅವನು ಶುದ್ಧನಾಗುತ್ತಾನೆ.

ಪೂಜಾಕಾಲೇ ಚ ಹೋಮೇ ಚ ಸಾಯಂ ಪ್ರಾತಸ್ಸಮಾಹಿತಃ ।
ನಾಮಾನ್ಯುಚ್ಚಾರ್ಯ ವಿಧಿನಾ ಧಾರಯೇದೂರ್ಧ್ವಪುಂಡ್ರಕಮ್ ॥ಸ.ಪ

ಪೂಜೆಯನ್ನು ಮಾಡುವಾಗ, ಹೋಮ ಮಾಡುವಾಗ, ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ ಸಮಾಹಿತನಾಗಿ ಕೇಶವಾದಿ ನಾಮಗಳನ್ನು ಉಚ್ಚರಿಸುತ್ತಾ ವಿಧಿಗೆ ಅನುಗುಣವಾಗಿ ಊರ್ಧ್ವಪುಂಡ್ರವನ್ನು ಧರಿಸಬೇಕು.

ತದಾರಭ್ಯ ಧರೇನ್ನಿತ್ಯಮೂರ್ಧ್ವಪುಂಡ್ರಂ ವಿಧಾನತಃ ।
ಸ್ವಾಧ್ಯಾಯೇ ಭೋಜನೇ ಚೈವ ಹೋಮೇ ಮಂಗಲಕರ್ಮಣಿ ॥

ತನಗೆ ವಿಹಿತವಾದ ಅಧ್ಯಯನವನ್ನು ಮಾಡುವಾಗ, ಭೋಜನಮಾಡು-ವಾಗ, ಮತ್ತು ಹೋಮಾದಿಮಂಗಲಕಾರ್ಯಗಳನ್ನು ಮಾಡುವಾಗ ಊರ್ಧ್ವ-ಪುಂಡ್ರಧಾರಣೆ ಅನಿವಾರ್ಯವಾಗಿದೆ.

ಊರ್ಧ್ವಪುಂಡ್ರಧರೋ ಭೂತ್ವಾ ರಕ್ಷಸಾಂ ಚಾಪನುತ್ತಯೇ ॥ ಸ್ಕ.ಮು

ತ್ರಿಸಂಧ್ಯಾಸು ಮೃದಾ ವಿಪ್ರೋ ಯಾಗಕಾಲೇ ವಿಶೇಷತಃ । ವೃ.ಹಾ.ಸ್ಮೃ

ಶ್ರಾದ್ಧೇ ದಾನೇ ತಥಾ ಹೋಮೇ ಸ್ವಾಧ್ಯಾಯೇ ಪಿತೃತರ್ಪಣೇ ।
ಶ್ರದ್ಧಾಲುರೂರ್ಧ್ವಪುಂಡ್ರಾಣಿ ಬಿಭೃಯಾದ್ ದ್ವಿಜಸತ್ತಮಃ ॥ ವೃ.ಹಾ.ಸ್ಮೃ

ಊರ್ಧ್ವಪುಂಡ್ರಧಾರಣೆಯಿಂದ ರಾಕ್ಷಸರಿಂದ ಆಗುವ ಪೀಡೆಗಳ ಪರಿಹಾರ-ವಾಗುತ್ತದೆ. ಮೂರು ಹೊತ್ತು ಸಂಧ್ಯಾಕಾಲದಲ್ಲಿ ಗೋಪೀಚಂದನದಿಂದ ಪುಂಡ್ರವನ್ನು ಧರಿಸಬೇಕು. ವಿಶೇಷವಾಗಿ ಯಾಗಕಾಲದಲ್ಲಿ ಪುಂಡ್ರಧಾರಣೆ ಅತ್ಯವಶ್ಯವಾಗಿದೆ. ಶ್ರಾದ್ಧಮಾಡುವಾಗ, ದಾನಮಾಡುವಾಗ, ಹೋಮಮಾಡುವಾಗ, ಸ್ವಾಧ್ಯಾಯಮಾಡುವಾಗ, ಪಿತೃಗಳ ತರ್ಪಣವನ್ನು ಮಾಡುವಾಗ, ಶ್ರದ್ಧೆಯಿಂದ ಪುಂಡ್ರಗಳನ್ನು ಧರಿಸಬೇಕು. ಅವನು ಉತ್ತಮನಾಗುತ್ತಾನೆ.

**೫೨. ಊರ್ಧ್ವಪುಂಡ್ರಧಾರಣಮಹಿಮಾ**

ಸರ್ವಪಾಪವಿಶುದ್ಧಾತ್ಮಾ ವಿಷ್ಣೋರ್ಲೋಕಂ ಸ ಗಚ್ಛತಿ ।
ಊರ್ಧ್ವಪುಂಡ್ರಮುರ್ಧ್ವರೇಖಂ ಲಲಾಟೇ ಯಸ್ಯ ದೃಶ್ಯತೇ ॥ ಪ.ಪು

ಯಾವನ ಮುಖದಲ್ಲಿ ಗೋಪೀಚಂದನದಿಂದ ತಿದ್ದಿದ ಊರ್ಧ್ವಪುಂಡ್ರವು ಪರಿಶೋಭಿಸುತ್ತಿದೆಯೋ ಅವನು ಸಕಲಪಾಪಗಳಿಂದ ನಿವೃತ್ತನಾಗುತ್ತಾನೆ. ವಿಷ್ಣುವಿನ ಲೋಕದಲ್ಲಿ ಅವನು ಸೇರಿ ಅಲ್ಲಿ ಸ್ವರೂಪಾನಂದವನ್ನು ಅನುಭವಿಸುತ್ತಾನೆ.

ಗೋಪೀಚಂದನಲಿಪ್ತಾಂಗಃ ಯಂ ಯಂ ಪಶ್ಯತಿ ಚಕ್ಷುಷಾ ।
ತಂ ತಂ ಶುದ್ಧಂ ವಿಜಾನೀಯಾನ್ನಾತ್ರ ಕಾರ್ಯಾ ವಿಚಾರಣಾ ॥ ಕೃ.ಮ

ಗೋಪೀಚಂದನದಿಂದ ಪುಂಡ್ರವನ್ನು ಧರಿಸಿದವನು ಯಾವ ಪದಾರ್ಥವನ್ನು ನೋಡುವನೋ ಆ ಪದಾರ್ಥ ಪರಿಶುದ್ಧವಾಗುತ್ತದೆ. ಈ ವಿಷಯದಲ್ಲಿ ಸರ್ವಥಾ ಸಂದೇಹ ಸಲ್ಲದು.

**೫೩. ಕರ್ಮಾಧಿಕಾರಕ್ಕಾಗಿ ಪುಂಡ್ರಧಾರಣೆ**

ತಿಲಕಂ ಬ್ರಹ್ಮಸೂತ್ರಂ ಚ ಶುಕ್ಲವಸ್ತ್ರಂ ಪವಿತ್ರಕಮ್ ।
ಕೇಶೇಷು ಚ ಶಿಖಾಬಂಧಃ ಪಂಚಮುದ್ರಾಧರೋ ದ್ವಿಜಃ ॥
ಕರ್ಮಾಧಿಕಾರೀ... .... ... .... ..... .... ॥ ಪ್ರ.ಪಾ

ತಿಲಕ, ಯಜ್ಞೋಪವೀತ, ಶುಭ್ರವಾದ ವಸ್ತ್ರ, ಪವಿತ್ರ, ಶಿಖಾಬಂಧ ಮತ್ತು ಪಂಚಮುದ್ರಾಧಾರಣೆ ಇವುಗಳಿಂದ ಯುಕ್ತನಾದವನು ಕರ್ಮಕ್ಕೆ ಅಧಿಕಾರಿಯಾಗುತ್ತಾನೆ.

ಉಪವೀತಂ ಶಿಖಾಬಂಧಮೂರ್ಧ್ವಪುಡ್ರಂ ವಿನಾ ಕೃತಮ್ ।
ಅಪವಿತ್ರಕೃತಂ ಕರ್ಮ ತತ್ಸರ್ವಂ ವಿಫಲಂ ಭವೇತ್ ॥

ಯಜ್ಞೋಪವೀತ, ಶಿಖಾಬಂಧ, ಊರ್ಧ್ವಪುಂಡ್ರ, ಪವಿತ್ರವಿಲ್ಲದೇ ಕರ್ಮವನ್ನು ಮಾಡಿದರೆ ಆ ಕರ್ಮವೆಲ್ಲ ನಿಷ್ಫಲವಾಗುತ್ತದೆ.

ನಿತ್ಯಂ ನೈಮಿತ್ತಿಕಂ ಚೈವ ಲೌಕಿಕಂ ಕರ್ಮ ವೈದಿಕಮ್ ।
ಊರ್ಧ್ವಪುಂಡ್ರಾಂಕಿತಂ ಕುರ್ಯಾತ್ತತ್ತತ್ಫಲಮವಾಪ್ನುಯಾತ್ ॥ ನಾ.ಪು

ನಿತ್ಯವಾದ ಕರ್ಮವಿರಲಿ, ನೈಮಿತ್ತಿಕವಾದ ಕರ್ಮವಿರಲಿ, ಲೌಕಿಕವಾದ ಕರ್ಮವಿರಲಿ, ವೈದಿಕವಾದ ಯಾವುದೇ ಕರ್ಮವಿರಲಿ ಆಯಾ ಕರ್ಮಗಳನ್ನು ಊರ್ಧ್ವಪುಂಡ್ರಾಂಕಿತನಾಗಿಯೇ ಮಾಡಬೇಕು. ಅಂದಾಗ ಆಯಾ ಫಲಗಳನ್ನು ಅವನು ಪಡೆಯುತ್ತಾನೆ.

**೫೪. ಸಜ್ಜನರ ಅನುಗ್ರಹವನ್ನು ಪಡೆಯಲು**

ಸಂತಃ ಸತೋಽನುಗೃಹ್ಣಂತಿ ದರ್ಶನಾದೇವ ಲಕ್ಷ್ಮಭಿಃ ।
ತ್ಯಜಂತ್ಯನ್ಯೇ ತದುಭಯಂ ಮುಖ್ಯಮೈಕಾಂತ್ಯಕಾರಣಮ್ ॥ ಭ.ಸಂ

ಊರ್ಧ್ವಪುಂಡ್ರ ಮತ್ತು ಮುದ್ರೆಗಳು ಶ್ರೀಹರಿಯ ಚಿಹ್ನೆಗಳಾಗಿವೆ. ಈ ಚಿಹ್ನೆಗಳನ್ನು ಧರಿಸಿದವರನ್ನು ಕಂಡು ಸಜ್ಜನರು ಅವರನ್ನು ಅನುಗ್ರಹಿಸುತ್ತಾರೆ. ಮಿಕ್ಕವರನ್ನು ಪರಿತ್ಯಜಿಸುತ್ತಾರೆ. ವಿಷ್ಣುಚಿಹ್ನೆಗಳನ್ನು ಧರಿಸದವರಿಗೆ ಸಜ್ಜನರ ಅನುಗ್ರಹವಾಗುವುದಿಲ್ಲ. ಇದಲ್ಲದೇ ಯಾವನು ಶ್ರೀಹರಿಯ ಚಿಹ್ನೆಗಳನ್ನು ಧರಿಸುವನೋ ಅವನು ಭಗವಂತನಲ್ಲಿ ಭಕ್ತಿಯನ್ನು ಅಭಿವೃದ್ಧಿಪಡಿಸಿಕೊಳ್ಳುತ್ತಾನೆ.

**೫೫. ಸನ್ಯಾಸಪದ್ಧತಿಯಲ್ಲಿ ಪುಂಡ್ರಮಹಿಮಾ**

ಶ್ರೀಮದಾಚಾರ್ಯರ ಅನುಜರಾದ ಶ್ರೀ ವಿಷ್ಣುತೀರ್ಥರು ರಚಿಸಿದ ಸನ್ಯಾಸಪದ್ಧತಿಯಲ್ಲಿ ಪುಂಡ್ರಧಾರಣೆಯ ಮಹಿಮೆಯು ಐತಿಹಾಸಿಕವಾಗಿ ಈ ರೀತಿಯಾಗಿ ನಿರೂಪಿತವಾಗಿದೆ-

ಬ್ರಹ್ಮನ್ ವೃತ್ರಭಯಾತ್ ಸರ್ವೇ ವಯಂ ತ್ವಾಂ ಶರಣಂ ಗತಾಃ ।
ಮಹತಾ ತಪಸಾ ತ್ವಷ್ಟುರವಧ್ಯಸ್ಯ ಮಹಾತ್ಮನಃ ॥

ವಧಾಯ ತಸ್ಯ ವೃತ್ರಸ್ಯ ಪೃಚ್ಛಾಮೋಽತ್ರ ವಿಧೇ ವಿಧಿಮ್ ।
ಇತ್ಯುಕ್ತಃ ಸೋಽವದದ್ಬ್ರಹ್ಮಾ ಸರ್ವಲೋಕಪಿತಾಮಹಃ ॥

ವಧೋಪಾಯಂ ಹಿ ದೇವೇಭ್ಯೋ ವೃತ್ರಸ್ಯಾದ್ಭುತಕರ್ಮಣಃ ।
ದೇವಾಃ ಶೃಣುತ ಭದ್ರಂ ವೋ ವಧೋಪಾಯಂ ರಿಪೋಃ ಪರಮ್ ॥

ಪ್ರೋಕ್ತಂ ತು ವಿಷ್ಣುನಾ ಪೂರ್ವಂ ಸರ್ವದಾ ಧೃತಮೇವ ಮೇ ।
ಮಧುಘ್ನನಾಮಭಿರ್ದೇಹೇ ಧೃತ್ವಾ ತದ್ಧೃತಚಂದನಮ್ ॥
ಚಕ್ರಶಂಖೌ ತಥಾಽಸ್ಯೇ ತು ಕಂಠೇ ಪದ್ಮಾಕ್ಷಮೇವ ಚ ।
ಹರೇರ್ನಾಮಾನಿ ಚ ಮುಖೇ ತತೋ ವೃತ್ರಂ ಹನಿಷ್ಯಥ ॥
ಏವಮುಕ್ತಾಸ್ತು ತೇ ದೇವಾಸ್ತಥಾ ಕೃತ್ವಾ ಮಹೌಜಸಃ ।
ತತ್ರ ತತ್ರ ಸ್ಥಿತಂ ವೃತ್ರಂ ನಿಜಘ್ನುರ್ವಿಷ್ಣುದೇವತಾಃ ॥
ತಸ್ಮಾತ್ ಸರ್ವೈಶ್ಚ ಕಾರ್ಯಾಣಿ ನರೈಸ್ತಾನಿ ಬುಭೂಷುಭಿಃ ।
ನ ವಿಶೇಷೋಽತ್ರ ವರ್ಣಾನಾಮಾಶ್ರಮಾಣಾಂ ತಥೈವ ಚ ।
ಅಯಂ ಭಾಗವತೋ ಧರ್ಮಃ ಸಂಕ್ಲೃಪ್ತೋ ಹರಿಣಾ ಸ್ವಯಮ್ ॥ಸ.ಪ

ಹೇ ಬ್ರಹ್ಮನ್ ! ವೃತ್ರಾಸುರನ ಭಯದಿಂದ ಸಂತ್ರಸ್ತರಾಗಿ ನಾವೆಲ್ಲ ನಿಮ್ಮನ್ನು ಮೊರೆ ಹೊಕ್ಕಿದ್ದೇವೆ. ಮಹಾತಪಸ್ಸನ್ನು ಮಾಡಿದ ವೃತ್ರ ಈಗ ಅವಧ್ಯನಾಗಿದ್ದಾನೆ. ಅವನನ್ನು ಸಂಹರಿಸುವ ವಿಧಾನವನ್ನು ಕೇಳಲು ನಾವೆಲ್ಲ ನಿಮ್ಮ ಹತ್ತಿರ ಬಂದಿದ್ದೇವೆ. ಈ ರೀತಿಯಾಗಿ ದೇವತೆಗಳೆಲ್ಲ ಕೇಳಿದಾಗ ಬ್ರಹ್ಮದೇವರು ಮಾರ್ನುಡಿದರು. ವೃತ್ರನು ಅದ್ಭುತವಾದ ತಪಸ್ಸನ್ನು ಮಾಡಿ ಅವಧ್ಯನಾಗಿದ್ದಾನೆ. ಆದರೂ ಅವನ ವಧಕ್ಕೆ ಒಂದು ಉಪಾಯವು ಪೂರ್ವದಲ್ಲಿಯೇ ವಿಹಿತವಾಗಿದೆ. ಆ ಉಪಾಯವನ್ನು ಶ್ರೀಹರಿಯು ನನಗೆ ತಿಳಿಸಿದ್ದಾನೆ. ನೀವೆಲ್ಲರೂ ಶ್ರೀಹರಿಯ ನಾಮಗಳಿಂದ ಪುಂಡ್ರಗಳನ್ನು, ಮತ್ತು ಮುದ್ರೆಗಳನ್ನು ಧರಿಸಿ, ಕಂಠದಲ್ಲಿ ಪದ್ಮಾಕ್ಷಮಾಲೆಯನ್ನು ಧರಿಸಿ, ಮುಖದಲ್ಲಿ ಶ್ರೀಹರಿಯ ನಾಮಗಳನ್ನು ಉಚ್ಚರಿಸುತ್ತಾ ವೃತ್ರಾಸುರನನ್ನು ಸಂಹರಿಸುವ ಪ್ರಯತ್ನವನ್ನು ಮಾಡಬೇಕು. ಆವಾಗ ವೃತ್ರನ ಸಂಹಾರ ನಿಮ್ಮಿಂದ ಸಾಧ್ಯವಾಗುತ್ತದೆ. ಎಂಬುದಾಗಿ ಬ್ರಹ್ಮದೇವರು ಹೇಳಿದ ನಂತರ ಅವರು ಗೋಪೀಚಂದನದಿಂದ ಚಕ್ರಾದಿಚಿಹ್ನೆಗಳಿಂದ ಭೂಷಿತರಾಗಿ ವೃತ್ರಾಸುರನನ್ನು ಸಂಹಾರಮಾಡಿದರು.

ಆದ್ದರಿಂದ ಎಲ್ಲರೂ ಪುಂಡ್ರಾದಿಗಳನ್ನು ಧರಿಸಬೇಕು. ಇದನ್ನು ಎಲ್ಲ ವರ್ಣದವರು, ಎಲ್ಲ ಆಶ್ರಮದವರು ಧರಿಸಬೇಕು. ಇದು ಭಾಗವತಧರ್ಮ. ಭಾಗವತರಾಗಬಯಸುವವರೆಲ್ಲರೂ ಅವಶ್ಯವಾಗಿ ಪುಂಡ್ರಾದಿಚಿಹ್ನೆಗಳಿಂದ ಯುಕ್ತರಾಗಬೇಕು.

### ೫೬. ಅಂತಕಾಲದಲ್ಲಿಯೂ ಗೋಪೀಚಂದನ ಕಡ್ಡಾಯ

ಗೋಹತ್ಯೆ ಮೊದಲಾದ ಪಾಪಗಳಿಗೆ ಊರ್ಧ್ವಪುಂಡ್ರಧಾರಣೆ ಇದೊಂದು ಪ್ರಾಯಶ್ಚಿತ್ತರೂಪವಾಗಿಯೂ ಇದೆ ಎಂಬುದನ್ನು ಈ ಮಾತು ಸೂಚ್ಯವಾಗಿ ತಿಳಿಸುತ್ತದೆ.

ಯಸ್ಯಾಂತಕಾಲೇ ಸುತ ಗೋಪಿಚಂದನಂ
ಬಾಹ್ವೋರ್ಲಲಾಟೇ ಹೃದಿ ಮಸ್ತಕೇ ಚ ।
ಪ್ರಯಾತಿ ಲೋಕೇ ಕಮಲಾಪತೇರ್ಮಮ
ಗೋಬಾಲಘಾತೀ ಯದಿ ಬ್ರಹ್ಮಹಾ ಸ್ಯಾತ್ ॥ ಸ್ಕ.ಪು

ಮನುಷ್ಯನು ಅಂತಕಾಲದಲ್ಲಿಯೂ ತನಗೆ ವಿಹಿತವಾದ ನಿಯಮಕ್ಕೆ ಅನುಗುಣವಾಗಿ ಹಣೆ ಮೊದಲಾದ ಅವಯವಗಳಲ್ಲಿ ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಅವನು ಮಾಡಿದ ಗೋಹತ್ಯಾ, ಬಾಲಹತ್ಯಾ, ಬ್ರಹ್ಮಹತ್ಯಾ ಮೊದಲಾದ ಪಾಪಗಳೆಲ್ಲ ಪರಿಹಾರವಾಗುತ್ತವೆ. ಹೀಗೆ ನಿಷ್ಪಾಪಿಯಾಗಿ ಕಮಲಾಪತಿಯಾದ ನನ್ನ ಲೋಕಕ್ಕೆ ಬರುತ್ತಾನೆ. ಬಂದು ಸುಖಿಸುತ್ತಾನೆ. ಇದು ಅಂತಕಾಲದಲ್ಲಿ ಮಾಡಿದ ಗೋಹತ್ಯೆ-ಬಾಲಹತ್ಯೆ-ಬ್ರಹ್ಮಹತ್ಯೆಗಳಿಗೆ ಪ್ರಾಯಶ್ಚಿತ್ತರೂಪವಾಗಿದೆ.

ಪಶ್ಚಾತ್ತಾಪವಿಲ್ಲದ ಸಹಸ್ರಾರು ಪ್ರಾಯಶ್ಚಿತ್ತಗಳು ಕೂಡಾ ಮನುಷ್ಯನ ಪಾಪಗಳನ್ನು ಪರಿಹರಿಸಲಾರವು. ಈ ವಿಷಯವನ್ನು ಗಮನದಲ್ಲಿಟ್ಟುಕೊಳ್ಳಬೇಕು.

### ೫೭. ಊರ್ಧ್ವಪುಂಡ್ರ ಧರಿಸಿದವಗೆ ಅನ್ನದಾನ

ಊರ್ಧ್ವಪುಂಡ್ರಧರೋ ಮರ್ತ್ಯೋ ಯದಾ ಯಸ್ಯಾನ್ನಮಶ್ನುತೇ ।
ತದಾ ವಿಂಶತ್ಕುಲಂ ತಸ್ಯ ನರಕಾದುದ್ಧರಾಮ್ಯಹಮ್ ॥ ಸ್ಕ.ಪು

ಊರ್ಧ್ವಪುಂಡ್ರವನ್ನು ಧರಿಸಿದ ಯಾವ ವ್ಯಕ್ತಿ ಯಾವನ ಮನೆಯಲ್ಲಿ ಭೋಜನ ಮಾಡುವನೋ ಅವನ ಇಪ್ಪತ್ತು ಕುಲದ ಉದ್ಧಾರವಾಗುತ್ತದೆ. ಅವರಿಗಾಗಿರುವ ನರಕವನ್ನು ನಾನು ಪರಿಹರಿಸುತ್ತೇನೆ ಎಂಬುದಾಗಿ ಭಗವಂತ ಪ್ರತಿಜ್ಞೆಯನ್ನು ಮಾಡಿರುತ್ತಾನೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ವಿಷ್ಣುವಿನ ಚಿಹ್ನೆಯಾದ ಗೋಪೀಚಂದನವನ್ನು ಯಾರು ಧರಿಸಿರುವನೋ ಅಂತಹ ವ್ಯಕ್ತಿಗೆ

ಅನ್ನದಾನಾದಿಗಳನ್ನು ಮಾಡಬೇಕು. ಪುಂಡ್ರರಹಿತನಾದ ವ್ಯಕ್ತಿಗೆ ಅನ್ನದಾನಾದಿ-ಗಳನ್ನು ಮಾಡಬಾರದೆಂದು ಈ ಮಾತು ಸೂಚ್ಯವಾಗಿ ತಿಳಿಸುತ್ತದೆ.

ಈ ವಿಷಯವನ್ನು ಅನುವಾದ ಮಾಡುವ ಪ್ರಾಣೇಶದಾಸರ ಈ ಸುಳಾದಿಯನ್ನು ಗಮನಿಸಬೇಕು-

ಹೀನಪುಂಡ್ರನು ಸುಪಂಡಿತನಾಗಿರಲು ಅವನ
ಆನನದಿ ಕೊಟ್ಟನ್ನ ಅಳುವದಿಂತು ।
ಏನು ದುಷ್ಕರ್ಮ ಒದಗಿತೋ ಈ ಒಡೆಯನಿಂದ
ಈ ನಷ್ಟನಿಗೆ ಕೊಡಿಸಿಕೊಂಡೆನೆಂದು ॥ ತಾರತಮ್ಯಸುಳಾದಿ

ಪುಂಡ್ರಹೀನನಾದವನು ದೊಡ್ಡಪಂಡಿತನೇ ಆಗಿರಲಿ ಅವನು ಅವೈಷ್ಣವನಾದ ಕಾರಣ ಅನ್ನದಾನವನ್ನು ಸರ್ವಥಾ ಮಾಡಬಾರದು. ಅವನಿಗೆ ಅನ್ನವನ್ನು ದಾನಮಾಡಿದರೆ ಆ ಅನ್ನದ ಅಭಿಮಾನಿಯಾದ ಜೀವನು ಸ್ವಯಂ ವೈಷ್ಣವನಾಗಿದ್ದರೆ ಈ ರೀತಿಯಾಗಿ ದುಃಖಿಸುತ್ತಾನೆ. ನಾನು ಪೂರ್ವಜನ್ಮದಲ್ಲಿ ಯಾವ ದುಷ್ಕೃತ್ಯವನ್ನು ಮಾಡಿರುವೆನೋ ಏನೋ ಇವತ್ತು ಈ ಯಜಮಾನ ನನ್ನನ್ನು ಅವೈಷ್ಣವನಿಗೆ ತುತ್ತಾಗುವಂತೆ ಮಾಡುತ್ತಿದ್ದಾನೆ ಎಂದು.

ಶಂಖಚಕ್ರಾದ್ಯಂಕನಂ ಚ ತುಲಸೀದಲಭಕ್ಷಣಮ್ ।
ಯಃ ಕುರ್ಯಾನ್ನಿಯತಂ ಭಕ್ತ್ಯಾ ಸ ಯಾತಿ ಪರಮಾಂ ಗತಿಮ್ ॥
ನಾನ್ಯಂ ದೇವಂ ನಮಸ್ಕುರ್ಯಾನ್ನಾನ್ಯಂ ದೇವಂ ನಿರೀಕ್ಷಯೇತ್ ।
ಚಕ್ರಾಂಕಿತಸ್ಸದಾ ತಿಷ್ಠೇನ್ಮದ್ಭಕ್ತಃ ಪಾಂಡುನಂದನ ॥ ಶಂ.ಸ್ಮೃ

### ೫೮. ಹೀನವಾದ ಕರ್ಮವೂ ಪೂರ್ಣವಾಗುತ್ತದೆ

ನಾವು ಮಾಡುವ ಯಾವ ಕರ್ಮವೂ ಸಮಗ್ರವಾಗಿರುವುದಿಲ್ಲ. ಅಸಮಗ್ರ-ವಾಗಿರುತ್ತದೆ. ಅರ್ಥಾತ್ ಕರ್ಮವನ್ನು ವಿಧಿಯಲ್ಲಿ ತಿಳಿಸಿದಂತೆ ಮಾಡಿರುವುದಿಲ್ಲ. ಈ ಕರ್ಮ ಪೂರ್ಣಗೊಳ್ಳಬೇಕಾದರೆ ಪರಮಾತ್ಮನ ಸ್ಮರಣೆ ಮುಖ್ಯಸಾಧನ-ವಾಗಿದೆ. ಇದರ ಜೊತೆಗೆ ಪುಂಡ್ರಧಾರಣೆಯೂ ಅವಾಂತರ ಕಾರಣವೆಂಬುದಾಗಿ ಈ ಮಾತು ತಿಳಿಸುತ್ತದೆ-

ಕ್ರಿಯಾವಿಹೀನಂ ಯದಿ ಮಂತ್ರಹೀನಂ
ಶ್ರದ್ಧಾವಿಹೀನಂ ಯದಿ ಕಾಮವರ್ಜಿತಮ್ ।
ಧೃತ್ವಾ ಲಲಾಟೇ ಯದಿ ಗೋಪಿಚಂದನಂ
ಪ್ರಾಪ್ನೋತಿ ಸತ್ಕರ್ಮಫಲಂ ಸದಾಽವ್ಯಯಮ್ ॥

ನಾವು ಮಾಡುವ ಸತ್ಕರ್ಮ ಶಾಸ್ತ್ರದಲ್ಲಿ ಹೇಳಿದಂತೆ ವಿಸ್ತಾರವಾಗಿರುವುದಿಲ್ಲ. ನಮ್ಮ ಸಮಯಕ್ಕೆ ಅನುಗುಣವಾಗಿ ಅದನ್ನು ಮೊಟಕುಗೊಳಿಸಿರುತ್ತೇವೆ. ಹೀಗೆ ಕ್ರಿಯಾಹೀನವಾಗಿರುತ್ತದೆ ನಮ್ಮ ಸತ್ಕರ್ಮ. ಎಲ್ಲ ಮಂತ್ರಗಳನ್ನು ಪಠಿಸದೇ ಕೆಲವೇ ಮಂತ್ರಗಳನ್ನು ಪಠಿಸಿ ಕರ್ಮವನ್ನು ಮಾಡಿರುತ್ತೇವೆ. ಇದು ಮಂತ್ರಹೀನತೆ. ಮಾಡುವ ಕರ್ಮದಲ್ಲಿ ಶ್ರದ್ಧೆ ಇರುವುದಿಲ್ಲ. ಪರೋಪಕಾರಾದಿಗಳನ್ನು ಮಾಡುವಾಗಲಂತೂ ವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ ಎಂದೂ ಬಯಸುವುದಿಲ್ಲ. ಹೀಗೆ ಕಾಮನಾಹೀನವಾಗಿರುತ್ತದೆ ನಮ್ಮ ಕರ್ಮ. ಇಷ್ಟೆಲ್ಲ ನ್ಯೂನತೆ ಇದ್ದರೂ ಗೋಪೀಚಂದನದಿಂದ ಊರ್ಧ್ವಪುಂಡ್ರ ಧರಿಸಿದ್ದರೇ ಸಾಕು. ತಾನು ಮಾಡಿದ ಸತ್ಕರ್ಮವು ಶಾಶ್ವತವಾದ ಮುಕ್ತಿರೂಪವಾದ ಫಲಕ್ಕೆ ಸಹಕಾರಿಯಾಗುತ್ತದೆ.

**೩೯. ಯಾವಾಗಲೂ ಮನೆಯಲ್ಲಿ ಗೋಪೀಚಂದನವಿರಬೇಕು**

ಯಸ್ಮಿನ್ ಗೃಹೇ ತಿಷ್ಠತಿ ಗೋಪಿಚಂದನಂ
ಭಕ್ತ್ಯಾ ಲಲಾಟೇ ಮನುಜೋ ಬಿಭರ್ತಿ ।
ತಸ್ಮಿನ್ ಗೃಹೇಽಹಂ ನಿವಸಾಮಿ ಸರ್ವದಾ
ಶ್ರಿಯಾಽನ್ವಿತಃ ಕಂಸನಿಷೂದನೋ ಹರಿಃ ॥

ಯಾವನ ಮನೆಯಲ್ಲಿ ಗೋಪೀಚಂದನವಿರುತ್ತದೆಯೋ, ಯಾವನು ಆ ಗೋಪೀಚಂದನವನ್ನು ಧರಿಸುತ್ತಾನೆಯೋ ಅವನ ಮನೆಯಲ್ಲಿ ನಾನು ಲಕ್ಷ್ಮೀಸಮೇತನಾಗಿ ನಿವಾಸ ಮಾಡುತ್ತೇನೆ. ಅವನ ಶತ್ರುಗಳನ್ನೆಲ್ಲ ಸಂಹರಿಸುತ್ತೇನೆ. ಅವನ ಪಾಪಗಳನ್ನು ಪರಿಹರಿಸುತ್ತೇನೆ.

ಲಕ್ಷ್ಮಿಯ ಸನ್ನಿಧಾನದಿಂದ ಮನೆಯು ಸಂಪತ್ತಿನಿಂದ ಸಮೃದ್ಧವಾಗುತ್ತದೆ. ಶ್ರೀಹರಿಯ ಸನ್ನಿಧಾನದಿಂದ ಆ ಮನೆಯು ಧರ್ಮಾಚರಣಗಳಿಗೆ ಆವಾಸವಾಗುತ್ತದೆ.

**೬೦. ಗೋಪೀಚಂದನದಾನಮ್**

ಗೋಪೀಚಂದನವನ್ನು ದಾನ ಮಾಡುವುದರ ಫಲವನ್ನು ವಿಶೇಷವಾಗಿ ಶ್ರೀಮದಾಚಾರ್ಯರು ಈ ಸ್ಮೃತಿಯ ಮೂಲಕ ತಿಳಿಸುತ್ತಾರೆ. ಈ ವಿಷಯವನ್ನು ತಿಳಿಸುವ ಸ್ಮೃತಿಗಳು ಅನೇಕವಾಗಿವೆ.

ಅನ್ನದಾನಕ್ಕಿಂತಲೂ ಗೋಪೀಚಂದನದಾನದಿಂದ ವಿಶೇಷವಾದ ಪುಣ್ಯವು ಬರುತ್ತದೆಂದು ಈ ಶ್ಲೋಕವನ್ನು ವ್ಯಾಖ್ಯಾನಿಸುವಾಗ ಉಮರ್ಜಿ ಆಚಾರ್ಯರು ತಿಳಿಸುತ್ತಾರೆ-

**ಯೋ ದದಾತಿ ದ್ವಿಜಾತಿಭ್ಯಃ ಚಂದನಂ ಗೋಪಿಮರ್ದಿತಮ್ ।**
**ಅಪಿ ಸರ್ಷಪಮಾತ್ರೇಣ ಪುನಾತ್ಯಾಸಪ್ತಮಂ ಕುಲಮ್ ॥ ಕೃ.ಮ**

ಬ್ರಾಹ್ಮಣನಿಗೆ, ಕ್ಷತ್ರಿಯನಿಗೆ ಮತ್ತು ವೈಶ್ಯನಿಗೆ ಗೋಪೀಚಂದನವನ್ನು ದಾನವಾಗಿ ಕೊಡಬೇಕು. ತನ್ನ ಮನೆಯಲ್ಲಿ ಇಲ್ಲದಿದ್ದರೂ ಸಾಸಿವೆ ಕಾಳಿನಷ್ಟಾದರೂ ಗೋಪೀಚಂದನವನ್ನು ದಾನಮಾಡಬೇಕು. ಇದರಿಂದ ತನ್ನ ಏಳುಕುಲದ ಉದ್ಧಾರವಾಗುತ್ತದೆ.

**೬೧. ಶೂದ್ರನೂ ದಾನ ಪಡೆಯಲು ಅರ್ಹ**

ಮೇಲಿನ ಪ್ರಮಾಣವಚನದಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಿಗೆ ಗೋಪೀಚಂದನದ ದಾನವನ್ನು ಮಾಡಬೇಕೆಂದು ''ದ್ವಿಜಾತಿಭ್ಯಃ'' ಎಂಬ ಶಬ್ದದಿಂದ ತಿಳಿಸಿದ್ದಾರೆ. ಶೂದ್ರನಾದವನು ಗೋಪೀಚಂದನವನ್ನು ದಾನ ಪಡೆಯಲು ಅರ್ಹನಲ್ಲವೇ ? ಎಂಬುವ ವಿಷಯವನ್ನು ಈ ಮುಂದಿನ ಪ್ರಮಾಣ ''ಯೋ ದದಾತಿ ಹಿ ವೈಷ್ಣವೇ '' ಎಂಬ ವಚನದ ಮೂಲಕ ಸಾಮಾನ್ಯವಾಗಿ ತಿಳಿಸುತ್ತದೆ-

**ಗೋಪೀಚಂದನಖಂಡಂ ತು ಯೋ ದದಾತಿ ಹಿ ವೈಷ್ಣವೇ ।**
**ಕುಲಮಷ್ಟೋತ್ತರಂ ತೇನ ಭವೇದ್ ವೈ ತಾರಿತಂ ಶತಮ್ ॥**

ಗೋಪೀಚಂದನವನ್ನು ಬ್ರಾಹ್ಮಣನಿಗೆ ದಾನಮಾಡಬೇಕೆಂದು ಅಲ್ಲ, ಬ್ರಾಹ್ಮಣನಾದ ಮಾತ್ರಕ್ಕೆ ದಾನಪಡೆಯಲು ಅರ್ಹ ಎಂದು ಭಾವಿಸಬಾರದು. ಅವನು ವೈಷ್ಣವನಾಗಿರಬೇಕು. ಹೀಗಾಗಿ ವೈಷ್ಣವನಾದ ಶೂದ್ರನಿಗೂ

ಕ್ರಿಯಾವಿಹೀನಂ ಯದಿ ಮಂತ್ರಹೀನಂ
ಶ್ರದ್ಧಾವಿಹೀನಂ ಯದಿ ಕಾಮವರ್ಜಿತಮ್ ।
ಧೃತ್ವಾ ಲಲಾಟೇ ಯದಿ ಗೋಪಿಚಂದನಂ
ಪ್ರಾಪ್ನೋತಿ ಸತ್ಕರ್ಮಫಲಂ ಸದಾಽವ್ಯಯಮ್ ॥

ನಾವು ಮಾಡುವ ಸತ್ಕರ್ಮ ಶಾಸ್ತ್ರದಲ್ಲಿ ಹೇಳಿದಂತೆ ವಿಸ್ತಾರವಾಗಿರುವುದಿಲ್ಲ. ನಮ್ಮ ಸಮಯಕ್ಕೆ ಅನುಗುಣವಾಗಿ ಅದನ್ನು ಮೊಟಕುಗೊಳಿಸಿರುತ್ತೇವೆ. ಹೀಗೆ ಕ್ರಿಯಾಹೀನವಾಗಿರುತ್ತದೆ ನಮ್ಮ ಸತ್ಕರ್ಮ. ಎಲ್ಲ ಮಂತ್ರಗಳನ್ನು ಪಠಿಸದೇ ಕೆಲವೇ ಮಂತ್ರಗಳನ್ನು ಪಠಿಸಿ ಕರ್ಮವನ್ನು ಮಾಡಿರುತ್ತೇವೆ. ಇದು ಮಂತ್ರಹೀನತೆ. ಮಾಡುವ ಕರ್ಮದಲ್ಲಿ ಶ್ರದ್ಧೆ ಇರುವುದಿಲ್ಲ. ಪರೋಪಕಾರಾದಿಗಳನ್ನು ಮಾಡುವಾಗಲಂತೂ ವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ ಎಂದೂ ಬಯಸುವುದಿಲ್ಲ. ಹೀಗೆ ಕಾಮನಾಹೀನವಾಗಿರುತ್ತದೆ ನಮ್ಮ ಕರ್ಮ. ಇಷ್ಟೆಲ್ಲ ನ್ಯೂನತೆ ಇದ್ದರೂ ಗೋಪೀಚಂದನದಿಂದ ಊರ್ಧ್ವಪುಂಡ್ರ ಧರಿಸಿದ್ದರೇ ಸಾಕು. ತಾನು ಮಾಡಿದ ಸತ್ಕರ್ಮವು ಶಾಶ್ವತವಾದ ಮುಕ್ತಿರೂಪವಾದ ಫಲಕ್ಕೆ ಸಹಕಾರಿಯಾಗುತ್ತದೆ.

**೫೯. ಯಾವಾಗಲೂ ಮನೆಯಲ್ಲಿ ಗೋಪೀಚಂದನವಿರಬೇಕು**

ಯಸ್ಮಿನ್ ಗೃಹೇ ತಿಷ್ಠತಿ ಗೋಪಿಚಂದನಂ
ಭಕ್ತ್ಯಾ ಲಲಾಟೇ ಮನುಜೋ ಬಿಭರ್ತಿ ।
ತಸ್ಮಿನ್ ಗೃಹೇಽಹಂ ನಿವಸಾಮಿ ಸರ್ವದಾ
ಶ್ರಿಯಾಽನ್ವಿತಃ ಕಂಸನಿಷೂದನೋ ಹರಿಃ ॥

ಯಾವನ ಮನೆಯಲ್ಲಿ ಗೋಪೀಚಂದನವಿರುತ್ತದೆಯೋ, ಯಾವನು ಆ ಗೋಪೀಚಂದನವನ್ನು ಧರಿಸುತ್ತಾನೆಯೋ ಅವನ ಮನೆಯಲ್ಲಿ ನಾನು ಲಕ್ಷ್ಮೀಸಮೇತನಾಗಿ ನಿವಾಸ ಮಾಡುತ್ತೇನೆ. ಅವನ ಶತ್ರುಗಳನ್ನೆಲ್ಲ ಸಂಹರಿಸುತ್ತೇನೆ. ಅವನ ಪಾಪಗಳನ್ನು ಪರಿಹರಿಸುತ್ತೇನೆ.

ಲಕ್ಷ್ಮಿಯ ಸನ್ನಿಧಾನದಿಂದ ಮನೆಯು ಸಂಪತ್ತಿನಿಂದ ಸಮೃದ್ಧವಾಗುತ್ತದೆ. ಶ್ರೀಹರಿಯ ಸನ್ನಿಧಾನದಿಂದ ಆ ಮನೆಯು ಧರ್ಮಾಚರಣಗಳಿಗೆ ಆವಾಸವಾಗುತ್ತದೆ.

**೬೦. ಗೋಪೀಚಂದನದಾನಮ್**

ಗೋಪೀಚಂದನವನ್ನು ದಾನ ಮಾಡುವುದರ ಫಲವನ್ನು ವಿಶೇಷವಾಗಿ ಶ್ರೀಮದಾಚಾರ್ಯರು ಈ ಸ್ಮೃತಿಯ ಮೂಲಕ ತಿಳಿಸುತ್ತಾರೆ. ಈ ವಿಷಯವನ್ನು ತಿಳಿಸುವ ಸ್ಮೃತಿಗಳು ಅನೇಕವಾಗಿವೆ.

ಅನ್ನದಾನಕ್ಕಿಂತಲೂ ಗೋಪೀಚಂದನದಾನದಿಂದ ವಿಶೇಷವಾದ ಪುಣ್ಯವು ಬರುತ್ತದೆಂದು ಈ ಶ್ಲೋಕವನ್ನು ವ್ಯಾಖ್ಯಾನಿಸುವಾಗ ಉಮರ್ಜಿ ಆಚಾರ್ಯರು ತಿಳಿಸುತ್ತಾರೆ-

**ಯೋ ದದಾತಿ ದ್ವಿಜಾತಿಭ್ಯಃ ಚಂದನಂ ಗೋಪಿಮರ್ದಿತಮ್ ।**
**ಅಪಿ ಸರ್ಷಪಮಾತ್ರೇಣ ಪುನಾತ್ಯಾಸಪ್ತಮಂ ಕುಲಮ್ ॥ ಕೃ.ಮ**

ಬ್ರಾಹ್ಮಣನಿಗೆ, ಕ್ಷತ್ರಿಯನಿಗೆ ಮತ್ತು ವೈಶ್ಯನಿಗೆ ಗೋಪೀಚಂದನವನ್ನು ದಾನವಾಗಿ ಕೊಡಬೇಕು. ತನ್ನ ಮನೆಯಲ್ಲಿ ಇಲ್ಲದಿದ್ದರೂ ಸಾಸಿವೆ ಕಾಳಿನಷ್ಟಾದರೂ ಗೋಪೀಚಂದನವನ್ನು ದಾನಮಾಡಬೇಕು. ಇದರಿಂದ ತನ್ನ ಏಳುಕುಲದ ಉದ್ಧಾರವಾಗುತ್ತದೆ.

**೬೧. ಶೂದ್ರನೂ ದಾನ ಪಡೆಯಲು ಅರ್ಹ**

ಮೇಲಿನ ಪ್ರಮಾಣವಚನದಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಿಗೆ ಗೋಪೀಚಂದನದ ದಾನವನ್ನು ಮಾಡಬೇಕೆಂದು ''ದ್ವಿಜಾತಿಭ್ಯಃ'' ಎಂಬ ಶಬ್ದದಿಂದ ತಿಳಿಸಿದ್ದಾರೆ. ಶೂದ್ರನಾದವನು ಗೋಪೀಚಂದನವನ್ನು ದಾನ ಪಡೆಯಲು ಅರ್ಹನಲ್ಲವೇ ? ಎಂಬುವ ವಿಷಯವನ್ನು ಈ ಮುಂದಿನ ಪ್ರಮಾಣ ''ಯೋ ದದಾತಿ ಹಿ ವೈಷ್ಣವೇ '' ಎಂಬ ವಚನದ ಮೂಲಕ ಸಾಮಾನ್ಯವಾಗಿ ತಿಳಿಸುತ್ತದೆ-

**ಗೋಪೀಚಂದನಖಂಡಂ ತು ಯೋ ದದಾತಿ ಹಿ ವೈಷ್ಣವೇ ।**
**ಕುಲಮಷ್ಟೋತ್ತರಂ ತೇನ ಭವೇದ್ ವೈ ತಾರಿತಂ ಶತಮ್ ॥**

ಗೋಪೀಚಂದನವನ್ನು ಬ್ರಾಹ್ಮಣನಿಗೆ ದಾನಮಾಡಬೇಕೆಂದು ಅಲ್ಲ, ಬ್ರಾಹ್ಮಣನಾದ ಮಾತ್ರಕ್ಕೆ ದಾನಪಡೆಯಲು ಅರ್ಹ ಎಂದು ಭಾವಿಸಬಾರದು. ಅವನು ವೈಷ್ಣವನಾಗಿರಬೇಕು. ಹೀಗಾಗಿ ವೈಷ್ಣವನಾದ ಶೂದ್ರನಿಗೂ

ಗೋಪೀಚಂದನವನ್ನು ಅವಶ್ಯವಾಗಿ ದಾನವಾಗಿ ನೀಡಬಹುದು. ಹೀಗೆ ವಿಧಾನಗಳನ್ನರಿತು ದಾನಮಾಡುವುದರಿಂದ ನೂರೊಂದು ಕುಲದ ಉದ್ಧಾರವಾಗುತ್ತದೆ.

ವಿಧಿಗೆ ಅನುಗುಣವಾಗಿ ಪುಂಡ್ರವನ್ನು ಧರಿಸಬೇಕು ಎಂಬ ಉದ್ದೇಶದಿಂದ ಗೋಪೀಚಂದನವನ್ನು ದಾನವಾಗಿ ನೀಡಬೇಕು. ಹೀಗಾಗಿ ಗೋಪೀಚಂದನವನ್ನು ಧರಿಸಲು ಅಧಿಕಾರವಿರುವ ಚಾಂಡಾಲನೂ ಕೂಡಾ ದಾನಪಡೆಯಲು ಅರ್ಹನಾಗುತ್ತಾನೆ.

ಆದರೆ ಗೋಪೀಚಂದನವನ್ನು ಶೂದ್ರಾದಿಗಳಿಗೆ ದಾನಮಾಡುವಾಗ ದಕ್ಷಿಣೆಯನ್ನು ಇಡಬಾರದು.

**೬೨. ವಿಶಿಷ್ಟವಾದ ಫಲಜನಕ**

**ಸಃ ಸ್ನಾತಸ್ಸರ್ವತೀರ್ಥೇಷು ಸ ಗೋಪೀರಮಣಂ ವ್ರಜೇತ್ ॥**
**ಗೋಪೀಚಂದನದಾನೇನ ಗೋದಾನಫಲವಾನ್ ಭವೇತ್ ॥**

ಗೋಪೀಚಂದನವನ್ನು ದಾನಮಾಡುವುದರಿಂದ ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯವು ಒದಗಿ ಬರುತ್ತದೆ. ಗೋಪೀಚಂದನದ ದಾನದಿಂದ ಗೋದಾನ ಮಾಡಿದಷ್ಟು ಪುಣ್ಯವು ಬರುತ್ತದೆ. ಹೀಗಾಗಿ ದರಿದ್ರರಾದವರು ಗೋದಾನಕ್ಕೆ ಪ್ರತ್ಯಾಮ್ನಾಯವಾಗಿ ಗೋಪೀಚಂದನದ ದಾನವನ್ನು ಅವಶ್ಯವಾಗಿ ಮಾಡಲೇಬೇಕು. ಈ ದಾನದ ಪ್ರಭಾವದಿಂದ ಭಕ್ತನಾದವನು ಶ್ರೀಪತಿಯ ಸನಿಹ ಸೇರಿ ಸುಖಿಸುತ್ತಾನೆ.

**೬೩. ಮುದ್ರಾಧಾರಣಮ್**

ಊರ್ಧ್ವಪುಂಡ್ರಧಾರಣೆ ಹೇಗೆ ಸಕಲಕರ್ಮಗಳಿಗೆ ಸಿದ್ಧಿಯನ್ನು ನೀಡುತ್ತದೋ ಹಾಗೆ ಚಕ್ರಾದಿಧಾರಣೆಯೂ ಸಕಲಕರ್ಮಗಳಿಗೆ ಸಿದ್ಧಿಯನ್ನು ನೀಡುತ್ತದೆ. ಈ ವಿಷಯದಲ್ಲಿ ಅನೇಕಸ್ಮೃತಿಗಳ ವಚನಗಳು ಪ್ರಮಾಣವಾಗಿವೆ. ವಸಿಷ್ಠಸ್ಮೃತಿಯ ಈ ವಚನವನ್ನು ಗಮನಿಸಿ-

ತಸ್ಮಾತ್ತು ವಿಧಿವದ್ಧಾರ್ಯಂ ಶಂಖಚಕ್ರಗದಾದಿಕಮ್ ।
ಪಶ್ಚಾತ್ ಸರ್ವಾಣಿ ಕರ್ಮಾಣಿ ಕುರ್ವೀತ ದ್ವಿಜಸತ್ತಮಃ ॥

ವಿಧಿಗೆ ಅನುಗುಣವಾಗಿ ಶಂಖ-ಚಕ್ರ-ಗದಾದಿಮುದ್ರೆಗಳನ್ನು ಧರಿಸಬೇಕು. ನಂತರ ಸಕಲಕರ್ಮಗಳನ್ನು ಮಾಡಬೇಕು. ಮುದ್ರಾದಿಗಳನ್ನು ಧರಿಸದೇ ಯಾವ ಕರ್ಮಗಳನ್ನೂ ಆಚರಿಸುವ ಅಧಿಕಾರವಿರುವುದಿಲ್ಲವೆಂದು ಭಾವ.

ಅತ್ರಿಮುನಿಗಳ ಮಾತು ಮತ್ತೊಂದು ಹೊಸದಾದ ಪ್ರಯೋಜನವನ್ನು ತಿಳಿಸುತ್ತದೆ-

**ತಸ್ಮಾತ್ಸುದರ್ಶನಂ ಚಕ್ರಂ ವಿಧಿನಾ ಧಾರಯೇತ್ ದ್ವಿಜಃ ।**
**ಕರ್ಮಸಿದ್ಧ್ಯೈ ವಿಶೇಷೇಣ ತದ್ದಾಸ್ಯೈಕಫಲಾಪ್ತಯೇ ॥**

ವಿಶಿಷ್ಟವಾದ ಫಲವಿರುವುದರಿಂದ ಸುದರ್ಶನಚಕ್ರ ಮೊದಲಾದ ಚಿಹ್ನೆಗಳನ್ನು ಧರಿಸಬೇಕು. ಇದರಿಂದ ಕರ್ಮವು ಸಫಲವಾಗುತ್ತದೆ. ಪರಮಾತ್ಮನ ದಾಸ್ಯವೇ ಪ್ರಮುಖವಾದ ಪ್ರಯೋಜನವಾಗಿದೆ. ಇದುವೇ ವಿಶಿಷ್ಟವಾದ ಪ್ರಯೋಜನವಾಗಿದೆ.

**೭೪. ಗೋಪೀಚಂದನದಿಂದ ನಿತ್ಯವೂ ಮುದ್ರಾಧಾರಣೆ**

ವಿಶಿಷ್ಟವಾದ ಪ್ರಸಂಗಗಳಲ್ಲಿ ತಪ್ತಮುದ್ರಾಧಾರಣೆಯನ್ನು ಮಾಡಿಸಿಕೊಂಡಿದ್ದರೂ ನಿತ್ಯವೂ ಗೋಪೀಚಂದನದಿಂದ ಮುದ್ರೆಯನ್ನು ಧರಿಸಲೇ ಬೇಕು. ಈ ವಿಷಯವನ್ನು ತಿಳಿಸುವ ಪ್ರಮಾಣವು ಹೀಗಿದೆ-

**ಗೋಪೀಚಂದನತೋ ನಿತ್ಯಂ ಶಂಖಚಕ್ರಗದಾದಿಕಮ್ ।**
**ಧೃತ್ವಾ ಕರ್ಮಾಣಿ ಕುರ್ವೀತ ಅನ್ಯಥಾ ನಿಷ್ಫಲಂ ಭವೇತ್ ॥**

ಗೋಪೀಚಂದನದಿಂದ ನಿತ್ಯವೂ ಶಂಖ-ಚಕ್ರಾದಿಗಳನ್ನು ಧರಿಸುತ್ತಿರಬೇಕು. ಹೀಗೆ ಧರಿಸಿಯೇ ಕರ್ಮಗಳನ್ನು ಆಚರಿಸಬೇಕು. ಇಲ್ಲದಿದ್ದರೆ ಆ ಕರ್ಮಗಳು ನಿಷ್ಫಲವಾಗುತ್ತವೆ.

ಮಹಾಭಾರತವು ಈ ವಿಷಯವನ್ನು ಮತ್ತಿಷ್ಟು ಸ್ಪಷ್ಟವಾಗಿ ತಿಳಿಸುತ್ತದೆ-

**ನಾನ್ಯಂ ದೇವಂ ನಮಸ್ಕುರ್ಯಾತ್ ನಾನ್ಯಂ ದೇವಂ ನಿರೀಕ್ಷಯೇತ್ ।**
**ಚಕ್ರಾಂಕಿತಃ ಸದಾ ತಿಷ್ಠೇತ್ ಮದ್ಭಕ್ತಃ ಪಾಂಡುನಂದನ ॥**

ವಿಷ್ಣುವನ್ನು ಹೊರತು ಮತ್ತೊಬ್ಬ ದೇವರನ್ನು ಸ್ವತಂತ್ರರೆಂದು ತಿಳಿದು ನಮಸ್ಕರಿಸಬಾರದು. ಮತ್ತೊಬ್ಬ ದೇವರನ್ನು ಸ್ವತಂತ್ರರೆಂದು ನಿರೀಕ್ಷಿಸಬಾರದು.

ಯಾವಾಗಲೂ ಚಕ್ರಾದಿವಿಷ್ಣುಚಿಹ್ನೆಗಳಿಂದ ಅಂಕಿತನಾಗಿಯೇ ನನ್ನ ಭಕ್ತನಾದವನು ಇರಬೇಕು.

**೬೫. ಚಕ್ರಾದಿಧಾರಣೆಯ ವಿಷಯದಲ್ಲಿ ಪ್ರಮಾಣ**

ಚಕ್ರಾದಿಮುದ್ರೆಗಳನ್ನು ಧರಿಸಬೇಕಾದವರು ಯಾರು ? ಈ ವಿಷಯದಲ್ಲಿ ಪ್ರಮಾಣವೇನು ? ಎಂಬ ವಿಷಯವನ್ನು ಪದ್ಮಪುರಾಣವು ತಿಳಿಸುತ್ತದೆ-

ಸರ್ವಾಶ್ರಮೇಷು ವಸತಾಂ ಬ್ರಾಹ್ಮಣಾನಾಂ ವಿಶೇಷತಃ ।
ವಿಧಿನಾ ಶಂಖಚಕ್ರಾದಿ ಧಾರ್ಯಂ ಹಿ ಶ್ರುತಿಚೋದನಾತ್ ॥
ಏವಂ ಮಹೋಪನಿಷದಿ ಪ್ರೋಕ್ತಂ ಚಕ್ರಾದಿಧಾರಣಮ್ ।
ತಥೈವ ಸಾಮ್ನಿ ಯಜುಷಿ ಋಚಿ ಪ್ರೋಕ್ತಂ ವರಾನನೇ ॥

ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿಗಳು, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಸ್ತ್ರೀಯರು ಎಲ್ಲರೂ ಮುದ್ರಾಧಾರಣೆಯನ್ನು ಮಾಡಬೇಕು. ಬ್ರಾಹ್ಮಣರು ಮಾತ್ರ ವಿಶೇಷವಾಗಿ ಮುದ್ರೆಗಳನ್ನು ಧರಿಸಬೇಕು. ಈ ವಿಷಯವನ್ನು ವೇದವೇ ಪ್ರತಿಪಾದಿಸುತ್ತದೆ.

ಮತ್ತು ಮಹೋಪನಿಷತ್ತು ಚಕ್ರಾದಿಧಾರಣೆಯ ವಿಷಯವನ್ನು ಸ್ಪಷ್ಟವಾಗಿ ನಿರೂಪಿಸುತ್ತದೆ. ಸಾಮವೇದ, ಯಜುರ್ವೇದ ಮತ್ತು ಋಗ್ವೇದವೂ ಚಕ್ರಾದಿಗಳನ್ನು ಧರಿಸಬೇಕೆಂಬ ವಿಷಯದಲ್ಲಿ ಪ್ರಮಾಣವಾಗಿದೆ.

**೬೬. ಯಾರು ಧರಿಸಬೇಕು**

ಏವಂ ತದೀಯಾ ವಿಪ್ರಾಶ್ಚ ಕ್ಷತ್ರಿಯಾ ವೈಶ್ಯಜಾತಯಃ ।
ಸ್ತ್ರಿಯಃ ಶೂದ್ರಾಃ ತಥೈವಾನ್ಯೇ ನ ತಚ್ಚಿಹ್ನವಿವರ್ಜಿತಾಃ ॥
ಭವೇಯುಃ ಸರ್ವದಾ ತಸ್ಮಾಚ್ಛಂಖಚಕ್ರಗದಾಂಬುಜೈಃ ।
ಗೋಪೀಚಂದನಸಮ್ಮಿಶ್ರೈಃ ಅಂಕಿತವ್ಯಾ ದ್ವಿಜೇನ ತು ॥ ಪ.ಸಂ

ಭಗವಂತನ ಭಕ್ತರಾದ ಬ್ರಾಹ್ಮಣರು ಕ್ಷತ್ರಿಯರು, ವೈಶ್ಯರು, ಸ್ತ್ರೀಯರು ಮತ್ತು ಶೂದ್ರರು, ಚಂಡಾಲಾದಿ ಉಳಿದವರೆಲ್ಲರೂ ಶ್ರೀಹರಿಯ ಚಿಹ್ನೆಗಳನ್ನು ಧರಿಸದೇ ಇರಬಾರದು. ಚಕ್ರ, ಶಂಖ, ಗದಾ, ಪದ್ಮ ಮೊದಲಾದ ಮುದ್ರೆಗಳನ್ನು ಬ್ರಾಹ್ಮಣರು ಗೋಪೀಚಂದನದಿಂದಲೂ ಧರಿಸಬೇಕು.

**ತಸ್ಮಾತ್ ಗೋಪೀಚಂದನೇನ ಚಕ್ರಾದಿಧಾರಣಂ ಕೃತ್ವಾ ಸಂಧ್ಯಾವಂದನಾದಿ ಕಾರ್ಯಮಿತಿ ಸಿದ್ಧಮ್ ।**

ಗೋಪೀಚಂದನದಿಂದ ಚಕ್ರಾದಿಗಳನ್ನು ಧರಿಸಿಯೇ ಸಂಧ್ಯಾವಂದನ ಮೊದಲಾದ ಕರ್ಮಗಳನ್ನು ಮಾಡಬೇಕು.

ಪರಾಶರಪುರಾಣವು ತಿಳಿಸುವ ವಿಶೇಷವಾದ ವಿಷಯವು ಈ ರೀತಿಯಾಗಿದೆ-

**ಉಪವೀತಂ ಶಿಖಾಬಂಧಂ ಊರ್ಧ್ವಪುಂಡ್ರಂ ತಥೈವ ಚ ।**
**ಚಕ್ರಲಾಂಛನಹೀನಸ್ಯ ವಿಪ್ರಸ್ಯ ವಿಫಲಂ ಭವೇತ್ ॥**

ಯಜ್ಞೋಪವೀತವನ್ನು ಧರಿಸಿದ್ದರೂ, ಜಟೆಯನ್ನು ಬಿಟ್ಟರೂ, ಊರ್ಧ್ವ-ಪುಂಡ್ರವನ್ನು ಧರಿಸಿದರೂ ಚಕ್ರಾದಿಗಳನ್ನು ಧರಿಸದ ವಿಪ್ರನ ಕರ್ಮಗಳೆಲ್ಲ ಪ್ರಯೋಜನಶೂನ್ಯವಾಗುತ್ತವೆ.

ವೃದ್ಧಮನುಗಳು ಮತ್ತೊಂದು ಪ್ರಯೋಜನವನ್ನು ತಿಳಿಸುತ್ತಾರೆ-

**ಊರ್ಧ್ವಪುಂಡ್ರಂ ತಥಾ ಚಕ್ರಂ ನಿತ್ಯಂ ಧಾರಯತೇ ನರಃ ।**
**ತೇನ ತಸ್ಯಾಶುಭಂ ನಶ್ಯೇತ್ ಶುಭಮಸ್ಯ ಪ್ರವರ್ಧತೇ ॥**

ಊರ್ಧ್ವಪುಂಡ್ರ ಮತ್ತು ಚಕ್ರಾದಿಗಳನ್ನು ನಿತ್ಯವೂ ಧರಿಸುತ್ತಿರಬೇಕು. ಅವನ ಅಶುಭಗಳೆಲ್ಲ ನಷ್ಟವಾಗುತ್ತವೆ. ಮತ್ತು ಅವನು ಮಾಡಿದ ಶುಭವು ನಿತ್ಯವೂ ಪ್ರವೃದ್ಧವಾಗುತ್ತದೆ.

**೬೭. ಪುಂಡ್ರಗಳ ಮೇಲೆಯೇ ಮುದ್ರಾಧಾರಣ**

ಊರ್ಧ್ವಪುಂಡ್ರವನ್ನು ಧರಿಸಿದ ಮೇಲೆ, ಆ ಪುಂಡ್ರಗಳ ಮಧ್ಯದಲ್ಲಿಯೇ ಚಕ್ರಾದಿಮುದ್ರೆಗಳನ್ನು ಧರಿಸಬೇಕು. ಈ ವಿಷಯವನ್ನು ಭರದ್ವಾಜಸಂಹಿತಾ ಈ ರೀತಿಯಾಗಿ ತಿಳಿಸುತ್ತದೆ. ಈ ವಚನಗಳನ್ನು ಗಮನಿಸಬೇಕು-

**ಕುರ್ಯಾದಹರಹಃ ಪಶ್ಚಾತ್ತಿಲಕೋಪರಿ ಮುದ್ರಿಕಾಃ ।**
**ಊರ್ಧ್ವಪುಂಡ್ರಾಂತರಾಲಸ್ಥಾನ್ ಚಕ್ರಾದೀನ್ ಧಾರಯೇತ್ಸದಾ ।**
**ಬಹಿಷ್ಕೃತಾ ಹ್ಯತಿಕ್ರುದ್ಧಾಃ ಪದಾತ್ ಪ್ರಚ್ಯಾವಯಂತಿ ತೇ ॥** ಭ.ಸಂ

ಪುಂಡ್ರವನ್ನು ಧಾರಣೆ ಮಾಡಿ ಅವುಗಳ ಮೇಲೆ ಮುದ್ರೆಗಳನ್ನು ಧರಿಸಬೇಕು. ಮುದ್ರೆಗಳನ್ನು ಸರಿಯಾಗಿ ಪುಂಡ್ರಗಳ ಮಧ್ಯಭಾಗದಲ್ಲಿ ಧರಿಸಬೇಕು. ಪುಂಡ್ರಗಳ ಹೊರಗೆ ಬರುವಂತೆ ಮುದ್ರೆಗಳನ್ನು ಧರಿಸಬಾರದು. ಹಾಗೆ ಧರಿಸಿದರೆ ಮುದ್ರೆಗಳಿಗೆ ಅಭಿಮಾನಿಗಳಾದ ದೇವತೆಗಳಿಗೆ ಕೋಪ ಬರುತ್ತದೆ. ಆ ದೇವತೆಗಳ ಶಾಪಕ್ಕೆ ಒಳಗಾದವರು ಸ್ಥಾನಭ್ರಷ್ಟರಾಗುತ್ತಾರೆ.

**೬೮. ಮುದ್ರಾಧಾರಿ ಮಾಡುವ ದಾನ**

ಮುದ್ರೆಗಳನ್ನು ಧರಿಸಿದವನು ಮಾಡುವ ದಾನದ ಫಲದ ಅತಿಶಯವನ್ನು ಬ್ರಹ್ಮಪುರಾಣ ಈ ರೀತಿಯಾಗಿ ತಿಳಿಸುತ್ತದೆ-

**ಕೃಷ್ಣಾಯುಧಾಂಕಿತೋ ಭೂತ್ವಾ ಜಲಾನ್ನಂ ಪ್ರದದಾತಿ ಯಃ ।**
**ತತ್ಸರ್ವಂ ಪ್ರತಿಗೃಹ್ಣಾತಿ ಗಯಾಯಾಂ ತು ಗದಾಧರಃ ॥** ಬ್ರ.ಪು

**ಕೃಷ್ಣಾಯುಧಾಂಕಿತೋ ಭೂತ್ವಾ ಜಲಾನ್ನಂ ಪ್ರದದಾತಿ ಯಃ ।**
**ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಮ್ ॥** ಬ್ರ.ಪು

ಶ್ರೀಕೃಷ್ಣನ ಚಕ್ರಾದಿ ಆಯುಧಗಳನ್ನು ಧರಿಸಿ ಜಲ,ಅನ್ನ ಮೊದಲಾದವುಗಳನ್ನು ದಾನಮಾಡಬೇಕು. ಅವನು ನೀಡಿದ ಈ ಎಲ್ಲ ದಾನವನ್ನು ಗಯಾಸ್ಥನಾದ ಗದಾಧರನು ಸಾಕ್ಷಾತ್ತಾಗಿ ಸ್ವೀಕರಿಸುತ್ತಾನೆ. ಇದರಿಂದ ವಿಶಿಷ್ಟವಾದ ಪುಣ್ಯವು ಒದಗುತ್ತದೆ.

ಕೃಷ್ಣಾಯುಧಾಂಕಿತನಾಗಿ ಮಾಡಿದ ಸ್ವಲ್ಪ ಅನ್ನದಾನ ಮೇರುವಿನಷ್ಟು ಫಲವನ್ನು ತಂದು ಕೊಡುತ್ತದೆ. ಅವನು ನೀಡಿದ ಅಲ್ಪವಾದ ಜಲವು ಸಾಗರಕ್ಕೆ ಪರಿಮಿತವಾದ ಪುಣ್ಯವನ್ನು ತಂದುಕೊಡುತ್ತದೆ. ಆದ್ದರಿಂದ ಚಕ್ರಾದಿಮುದ್ರೆಗಳನ್ನು ಧರಿಸಿ ದಾನ ಮೊದಲಾದ ಸತ್ಕರ್ಮಗಳನ್ನು ಮಾಡಬೇಕು.

**೬೯. ಮುದ್ರೆಗಳನ್ನು ಧರಿಸಿ ದೈವ-ಪಿತೃಕರ್ಮಗಳನ್ನು ಮಾಡಬೇಕು**

ಕೃಷ್ಣಮುದ್ರಾಂಕಿತೋ ಯಸ್ತು ದೈವಂ ಪಿತ್ರ್ಯಂ ಕರೋತಿ ಯಃ ।
ನಿತ್ಯಂ ನೈಮಿತ್ತಿಕಂ ವಾಽಪಿ ಪ್ರತ್ಯಹಂ ಚಾಕ್ಷಯಂ ಭವೇತ್ ॥ ಬ್ರ.ಪು

ದೈವ-ಪೈತೃಕಕರ್ಮಗಳು ನಿತ್ಯ-ನೈಮಿತ್ತಿಕ ಎಂದು ಎರಡು ವಿಧವಾಗಿರುತ್ತವೆ. ಈ ಯಾವ ಕರ್ಮಗಳನ್ನಾದರೂ ಆಚರಿಸುವಾಗ ಊರ್ಧ್ವಪುಂಡ್ರವನ್ನು ಧರಿಸಿದಂತೆ ಚಕ್ರಾದಿಮುದ್ರೆಗಳನ್ನೂ ಧರಿಸಬೇಕು. ಹೀಗೆ ಚಕ್ರಾದ್ಯಾಯುಧಗಳಿಂದ ಅಂಕಿತನಾಗಿ ಪ್ರತಿನಿತ್ಯ ಮಾಡುವ ಕರ್ಮಗಳು ಅಕ್ಷಯವಾದ ಫಲವನ್ನು ನೀಡುತ್ತವೆ.

ಶ್ರಾದ್ಧದಲ್ಲಿ ಪ್ರಧಾನವಾದ ಕರ್ಮಗಳು ಎರಡು. ಮೊದಲನೆಯದು ಬ್ರಾಹ್ಮಣಭೋಜನ. ಎರಡನೆಯದು ಪಿಂಡಪ್ರದಾನ. ಯೋಗ್ಯರಾದ, ಶ್ರೋತ್ರಿಯರಾದ, ಸದಾಚಾರಿಗಳಾದ ಬ್ರಾಹ್ಮಣರನ್ನು ಶ್ರಾದ್ಧಕ್ಕಾಗಿ ನಿಮಂತ್ರಿಸಬೇಕು. ಇಂತಹ ಬ್ರಾಹ್ಮಣರು ಅಲಭ್ಯರಾದಾಗ ಏನು ಮಾಡಬೇಕು ಎಂಬುದನ್ನು ಈ ವಚನ ಅತಿ ಸ್ಪಷ್ಟವಾಗಿ ತಿಳಿಸುತ್ತದೆ-

**ಸಗೋತ್ರಂ ಯದ್ಯಪಿ ಶ್ರಾದ್ಧೇ ಚಕ್ರಾಂಕಿತಭುಜಂ ಚರೇತ್ ।**
**ಸ ಸಾಕ್ಷಾದ್ವಿಷ್ಣುಸಾಮೀಪ್ಯಂ ತತ್ಪಿತಾ ಲಭತೇ ಸದಾ ॥**

ಶ್ರಾದ್ಧದಲ್ಲಿ ಯೋಗ್ಯನಾದ ಬ್ರಾಹ್ಮಣನು ಸಿಗದಿರುವಾಗ ಚಕ್ರಾದ್ಯಾಯುಧ-ಗಳನ್ನು ಧರಿಸಿದ ಸ್ವಗೋತ್ರದವನೇ ಆದವನನ್ನು ನಿಮಂತ್ರಿಸಬೇಕು. ಅವನು ಶ್ರಾದ್ಧಕ್ಕೆ ಅರ್ಹನಾದ ಬ್ರಾಹ್ಮಣನಾಗುತ್ತಾನೆ. ಅವನಿಗೆ ಭೋಜನವನ್ನು ಕಲ್ಪಿಸಿ ದಾನವನ್ನು ನೀಡುವುದರಿಂದ ಪಿತೃಗಳಿಗೆ ಅತಿಶಯವಾದ ಪ್ರೀತಿಯಾಗುತ್ತದೆ. ಈ ಶ್ರಾದ್ಧದಿಂದ ಪಿತೃಗಳು ವಿಷ್ಣುವಿನ ಸಾಮೀಪ್ಯವನ್ನು ಪಡೆಯುತ್ತಾರೆ. ಈ ವಿಷಯದಲ್ಲಿ ಸದಾ ಜಾಗರೂಕನಾಗಿ ಇರಬೇಕು.

### ೭೦. ಮುದ್ರೆಗಳನ್ನು ಧರಿಸಿದವನು ಪೂಜ್ಯ

ಶಂಖಚಕ್ರಾಂಕಿತಾನ್ ವಿಪ್ರಾನ್ ಯಃ ಪೂಜಯತಿ ಮಾನವಃ ।
ಸ ಸಾಕ್ಷಾದ್ವಿಷ್ಣುಸಾಮೀಪ್ಯಂ ಲಭತೇ ನಾತ್ರ ಸಂಶಯಃ ॥
ವಿಷ್ಣುಚಕ್ರಾಂಕಿತಂ ವಿಪ್ರಂ ಯೋ ಭೂಮ್ಯಾಮಭಿವಾದಯೇತ್ ।
ಲಲಾಟೇ ಪಾಂಸುಸಂಖ್ಯಾನಿ ಬ್ರಹ್ಮಲೋಕೇ ಮಹೀಯತೇ ॥

ಚಕ್ರ-ಶಂಖಾದ್ಯಾಯುಧಗಳಿಂದ ಅಂಕಿತರಾದವರನ್ನು ಸದಾ ಪೂಜಿಸಬೇಕು. ಅವರಿಗೆ ಯೋಗ್ಯವಾದ ಗೌರವವನ್ನು ನೀಡುತ್ತಿರಬೇಕು. ಇವರಿಗೆ ಮಾಡಿದ ಪೂಜೆಯಿಂದ ಪರಮಾತ್ಮ ಪ್ರೀತನಾಗುತ್ತಾನೆ. ಈ ಪೂಜೆ ವಿಷ್ಣುಲೋಕದ ಪ್ರಾಪ್ತಿಗೆ ಉಪಾಯವಾಗಿದೆ. ಈ ವಿಷಯದಲ್ಲಿ ಸಂದೇಹವಿಲ್ಲ.

ಚಕ್ರಾದ್ಯಾಯುಧಗಳಿಂದ ಅಂಕಿತನಾದವನಿಗೆ ಪ್ರತಿನಿತ್ಯ ಸಾಷ್ಟಾಂಗ ನಮಸ್ಕಾರವನ್ನು ಸಲ್ಲಿಸಬೇಕು. ಭೂಮಿಯ ಸಂಪರ್ಕ ಗಾತ್ರಕ್ಕೆ ಆಗುವಂತೆ ಆ ನಮಸ್ಕಾರವಿರಬೇಕು. ಹೀಗೆ ನಮಸ್ಕಾರಮಾಡುತ್ತಿರುವಾಗ ಮನುಷ್ಯನ ಗಾತ್ರಕ್ಕೆ ಎಷ್ಟು ಪಾಂಸುಗಳ ಅರ್ಥಾತ್ ಧೂಲಿಗಳ ಸಂಪರ್ಕವಾಗುತ್ತದೆಯೋ ಅಷ್ಟು ಕಾಲ ಬ್ರಹ್ಮಲೋಕದಲ್ಲಿ ಸುಖಿಯಾಗಿ ವಾಸಮಾಡುತ್ತಾನೆ.

ನಾವು ಮಣ್ಣಿನ ಪ್ರದೇಶದಲ್ಲಿ ಹಿರಿಯರಿಗೆ, ಗುರುಗಳಿಗೆ, ವೃಂದಾವನಗಳಿಗೆ, ದೇವರಿಗೆ ನಮಸ್ಕಾರಮಾಡಲು ಹಿಂಜರಿಯುತ್ತೇವೆ. ಬಟ್ಟೆಗೆ, ದೇಹಕ್ಕೆ ಮಣ್ಣು ಮೆತ್ತಿಕೊಳ್ಳುತ್ತದೆ ಮೈ ಎಲ್ಲ ಹೊಲಸು ಆಗುತ್ತದೆಂದು ಸ್ವಚ್ಛವಾದ ಸ್ಥಳವನ್ನು ನಮಸ್ಕಾರಕ್ಕಾಗಿ ಹುಡುಕಾಡುತ್ತಿರುತ್ತೇವೆ. ನಮಗಾಗಿಯೇ ಈ ಸ್ಮೃತಿಯು ಪ್ರವೃತ್ತವಾದಂತೆ ತೋರುತ್ತದೆ. ಈ ವಚನವನ್ನು ವಿಶೇಷವಾಗಿ ನಾವು ಗಮನದಲ್ಲಿಟ್ಟುಕೊಳ್ಳಬೇಕು.

ಹಲವು ವಿಶೇಷವಾದ ವಿಷಯಗಳನ್ನು ಈ ಸ್ಮೃತಿಯು ತಿಳಿಸುತ್ತದೆ-

**ಅಭ್ಯಂಗನಾದಿಶುಶ್ರೂಷಾಂ ಯಃ ಕರೋತಿ ಹಿ ಮಾನವಃ ।**
**ಚಕ್ರಾಂಕಿತಾಯ ವಿಪ್ರಾಯ ವಿಷ್ಣುಸಾಯುಜ್ಯಮಾಪ್ನುಯಾತ್ ॥**

ಚಕ್ರಾಂಕಿತನಾದ ಬ್ರಾಹ್ಮಣನನ್ನು ಅಭ್ಯಂಗನಾದಿಗಳಿಂದ ಸೇವಿಸಬೇಕು. ಈ ಸೇವೆಯಿಂದ ಪರಮಾತ್ಮ ಪರಿತುಷ್ಟನಾಗುತ್ತಾನೆ. ಪರಮಾತ್ಮನ ಪ್ರಸಾದದಿಂದ ವಿಷ್ಣುವಿನ ಲೋಕಗಳನ್ನು ಸೇರಿ ಸುಖಿಸುತ್ತಾನೆ.

**೭೧. ಚಕ್ರಾಂಕಿತನಾದವನಿಗೆ ಕನ್ಯಾದಾನ**

ಅನ್ನದಾನವನ್ನು ವೈಷ್ಣವನಾದವನಿಗೆ ಮಾಡಬೇಕು. ಅವೈಷ್ಣವನಾದವನಿಗೆ ಸರ್ವಥಾ ಅನ್ನದಾನವನ್ನು ಮಾಡಬಾರದೆಂದು ಶ್ರೀಮದಾಚಾರ್ಯರು ತಿಳಿಸುತ್ತಾರೆ. ಇದಕ್ಕಾಗಿ ವೈಷ್ಣವತೆಯನ್ನು ಪರೀಕ್ಷಿಸುತ್ತಾ ಕೂಡಬಾರದು. ಲಿಂಗಗಳಿಂದ ವೈಷ್ಣವತೆಯನ್ನು ನಿರ್ಧಾರ ಮಾಡಿಕೊಂಡು ಅನ್ನದಾನವನ್ನು ಮಾಡಬೇಕೆಂಬುದಾಗಿ ಶ್ರೀನಿವಾಸತೀರ್ಥರು ತಮ್ಮ ಆಹ್ನಿಕಕೌಸ್ತುಭದಲ್ಲಿ ತಿಳಿಸುತ್ತಾರೆ.

ಆದರೆ ಕನ್ಯಾದಾನವನ್ನು ಮಾಡಬೇಕಾದಾಗ ಮಾತ್ರ ವೈಷ್ಣವತೆಯನ್ನು ಪರೀಕ್ಷಾಪೂರ್ವಕವಾಗಿ ದೃಢಪಡಿಸಿಕೊಳ್ಳಬೇಕು. ನಂತರವೇ ಕನ್ಯಾದಾನವನ್ನು ಮಾಡಬೇಕು. ಈ ವಿಷಯದಲ್ಲಿ ಸದಾ ಜಾಗರೂಕರಾಗಿರಬೇಕೆಂದು ಶ್ರೀನಿವಾಸತೀರ್ಥರು ತಿಳಿಸುತ್ತಾರೆ. ವೈಷ್ಣವತೆಯ ಪರೀಕ್ಷೆಯಲ್ಲಿ ಪ್ರಧಾನವಾದ ಈ ಅಂಶವನ್ನು ಗಮನಿಸಬೇಕೆಂಬುದನ್ನು ಪ್ರಸ್ತುತವಾದ ಈ ಸ್ಮೃತಿಯು ತಿಳಿಸುತ್ತದೆ-

ಚಕ್ರಾಂಕಿತಾಯ ವಿಪ್ರಾಯ ಕನ್ಯಾದಾನಂ ಕರೋತಿ ಯಃ ।
ಪರಮಾನಂದಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥

ಸು.ಮೀ.ವಿ

ಕನ್ಯಾದಾನದ ವಿಷಯದಲ್ಲಿ ಈ ವಿಷಯವನ್ನು ಮೊದಲಿಗೆ ತಿಳಿದಿರಬೇಕು. ಬ್ರಾಹ್ಮಣನಾದವನು ಬ್ರಾಹ್ಮಣರಿಗೇನೇ ಕನ್ಯಾದಾನವನ್ನು ಮಾಡಬೇಕು. ಈ ವಿಷಯದಲ್ಲಿ ಅವಶ್ಯವಾಗಿ ನಿಷ್ಠುರನಾಗಬೇಕು. ಬ್ರಾಹ್ಮಣನಾಗಿದ್ದಾನೆಂದು ವಿಷ್ಣುಭಕ್ತನಾಗದವನಿಗೆ ಕನ್ಯಾದಾನವನ್ನು ಸರ್ವಥಾ ಮಾಡಬಾರದು. ಅವನು ವೈಷ್ಣವನಾಗಿರಬೇಕು. ವಿಷ್ಣುವಿನಲ್ಲಿ ಭಕ್ತಿ ಜಾಗರೂಕವಾಗಿರಬೇಕು. ಕನ್ಯೆಗಿಂತಲೂ ಹೆಚ್ಚಿನ ವಿಷ್ಣುಭಕ್ತಿ ಅವನಿಗಿರಬೇಕು. ಇದನ್ನು ವರನಲ್ಲಿ ಪರೀಕ್ಷಿಸಬೇಕು.

ಅವನು ಪ್ರತಿನಿತ್ಯ ವಿಷ್ಣುವಿನ ಚಕ್ರವೊದಲಾದ ಆಯುಧಗಳನ್ನು ಧರಿಸುತ್ತಿರಬೇಕು. ಈ ವಿಷಯವನ್ನು ಪರೀಕ್ಷಿಸಿ ದೃಢಮಾಡಿಕೊಳ್ಳಬೇಕು. ಇಂತಹ ವೀರವೈಷ್ಣವನಾದ ಬ್ರಾಹ್ಮಣನಿಗೆ ಕನ್ಯಾದಾನ ಮಾಡುವುದರಿಂದ ಕನ್ಯಾದಾತನು ವಿಷ್ಣುವಿನ ಲೋಕವನ್ನು ಪಡೆದು ಪರಮಾನಂದಮಗ್ನನಾಗುತ್ತಾನೆ.

**೭೨. ಚಕ್ರಾದಿಮುದ್ರೆಗಳನ್ನು ಧರಿಸುವಾಗ ಪಠಿಸಬೇಕಾದ ಮಂತ್ರಗಳು**

ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ ।
ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ ॥

ಶ್ರೀಹರಿಯ ಚಕ್ರವು ಸುದರ್ಶನನಾಮಕವಾಗಿದೆ. ಮಹಾಜ್ವಾಲೆಯಿಂದ ಯುಕ್ತವಾಗಿದೆ. ಕೋಟಿಸೂರ್ಯರಿಗೆ ಸಮವಾದ ಕಾಂತಿಯಿಂದ ಕೂಡಿಕೊಂಡಿದೆ. ಅಜ್ಞಾನಾಂಧಕಾರದಲ್ಲಿ ಬಳಲುತ್ತಿರುವ ನನಗೆ ನಿತ್ಯವೂ ಶ್ರೀಹರಿಯನ್ನು ಹೊಂದಲು ಮಾರ್ಗವನ್ನು ತೋರಿಸುತ್ತದೆ.

ಪಾಂಚಜನ್ಯ ನಿಜಧ್ವಾನಧ್ವಸ್ತಪಾತಕಸಂಚಯ ।
ಪಾಹಿ ಮಾಂ ಪಾಪಿನಂ ಘೋರಂ ಸಂಸಾರಾರ್ಣವಪಾತಿನಮ್ ॥

ಪಾಂಚಜನ್ಯನಾಮಕನಾದ ನೀನು ಶ್ರೀಹರಿಯ ಕೈಯಲ್ಲಿ ಶೋಭಿಸುತ್ತಿರುವಿ. ನೀನು ನಿನ್ನ ಧ್ವನಿಯಿಂದ ಭಗವದ್ಭಕ್ತರ ಪಾತಕಗಳನ್ನು ಧ್ವಂಸಗೊಳಿಸುತ್ತಿ. ನಾನು ಪಾಪಿಯಾಗಿದ್ದೇನೆ. ಘೋರವಾದ ಸಂಸಾರಸಾಗರದಲ್ಲಿ ದಿಕ್ಕುಗಾಣದೇ ಬಿದ್ದಿರುವೆ. ನನ್ನನ್ನು ನೀನು ರಕ್ಷಿಸು.

ಸಂಸಾರಭಯಭೀತಾನಾಂ ಯೋಗಿನಾಮಭಯಪ್ರದಮ್ ।
ಪದ್ಮಹಸ್ತೇನ ಯೋ ದೇವೋ ಯೋಗೀಶಂ ತಂ ನಮಾಮ್ಯಹಮ್ ॥

ಪದ್ಮವನ್ನು ಕೈಯಲ್ಲಿ ಧರಿಸಿರುವ ಪರಮಾತ್ಮ ಸಂಸಾರದಿಂದ ಭೀತರಾದ ಯೋಗಿಗಳಿಗೆ ಅಭಯವನ್ನು ನೀಡುತ್ತಾನೆ. ಅಂತಹ ಯೋಗೀಶನಾದ ಪರಮಾತ್ಮನಿಗೆ ನಮಸ್ಕಾರಗಳು. ಅವನು ಕೈಯಲ್ಲಿ ಧರಿಸಿರುವ ಪದ್ಮಕ್ಕೂ ನಮಸ್ಕಾರಗಳು.

ಬ್ರಹ್ಮಾಂಡಭುವನಾರಂಭೇ ಮೂಲಸ್ತಂಭೋ ಗದಾಧರಃ ।
ಕೌಮೋದಕೀ ಕರೇ ಯಸ್ಯ ತಂ ನಮಾಮಿ ಗದಾಧರಮ್ ॥

ಕೌಮೋದಕೀಗದೆಯನ್ನು ತನ್ನ ಹಸ್ತದಲ್ಲಿ ಪರಮಾತ್ಮ ಧರಿಸಿದ್ದಾನೆ. ಆದ್ದರಿಂದ ಗದಾಧರನಾಮಕನಾಗಿದ್ದಾನೆ. ಈ ಗದಾಧರ ಬ್ರಹ್ಮಾಂಡದ ಆರಂಭಕ್ಕೆ ಮೂಲಸ್ತಂಭನಾಗಿದ್ದಾನೆ. ಇಂತಹ ಭಗವಂತನಿಗೆ ಭಕ್ತಿಯಿಂದ ನಮಸ್ಕರಿಸುತ್ತೇನೆ. ಶ್ರೀಹರಿಯ ಕೈಯಲ್ಲಿ ಪರಿಶೋಭಿಸುತ್ತಿರುವ ಕೌಮೋದಕೀನಾಮಕವಾದ ಗದೆಯನ್ನೂ ನಮಸ್ಕರಿಸುತ್ತೇನೆ.

ನಾರಾಯಣ ನಮಸ್ತೇಽಸ್ತು ನಾಮಮುದ್ರಾಂಕಿತಂ ನರಮ್ ।
ದೃಷ್ಟ್ವೈವ ಲಭತೇ ಮುಕ್ತಿಂ ಚಾಂಡಾಲೋ ಬ್ರಹ್ಮಘಾತಕಃ ॥

ಹೇ ನಾರಾಯಣ ! ನಿನಗೆ ನನ್ನ ನಮಸ್ಕಾರ. ನಾರಾಯಣನಾಮವಿರುವ ಮುದ್ರೆಯಿಂದ ಅಂಕಿತರಾದವರನ್ನು ನೋಡಿದವರು ಸ್ವಯಂ ಚಾಂಡಾಲನಾದರೂ ಅವನು ಬ್ರಹ್ಮಹತ್ಯಾದಿಪಾತಕಗಳಿಂದ ಮುಕ್ತನಾಗುತ್ತಾನೆ. ಇದು ನಿನ್ನ ನಾಮದ ಹಿರಿಮೆ.

## ೭೩. ಚಕ್ರಾದಿಗಳನ್ನು ಧರಿಸಬೇಕಾದ ಸ್ಥಾನಗಳು

ಶ್ರೀನಿವಾಸತೀರ್ಥರು ಸದಾಚಾರಸ್ಮೃತಿಯ ಆಹ್ನಿಕಕೌಸ್ತುಭವೆಂಬ ತಮ್ಮ ವ್ಯಾಖ್ಯಾನದಲ್ಲಿ ಪ್ರಮಾಣಪೂರ್ವಕವಾಗಿ ತಿಳಿಸಿರುವ ಮುದ್ರಾಧಾರಣೆಯ ಸ್ಥಾನಗಳು ಈ ರೀತಿಯಾಗಿವೆ-

ಇತ್ಯಾಯುಧಾನಿ ಸಂಪ್ರಾರ್ಥ್ಯ ಗೃಹೀತ್ವಾ ಮುದ್ರಿಕಾಸ್ತು ತಾಃ ।
ಧಾರಯೇತ್ ತಿಲಕೇಷ್ವೇತಾನ್ ವಿಷ್ಣುಸಾಯುಜ್ಯಸಿದ್ಧಯೇ ॥

ಮೊದಲು ಆಯುಧಗಳನ್ನು ಪ್ರಾರ್ಥನೆ ಮಾಡಿ ನಂತರ ಮುದ್ರೆಗಳನ್ನು ತೆಗೆದುಕೊಂಡು ತಿಲಕಗಳಲ್ಲಿ ಅವುಗಳನ್ನು ಧರಿಸಬೇಕು. ಇದು ವಿಷ್ಣುಸಾಯುಜ್ಯಕಾರಕವಾಗಿದೆ.

**ಚಕ್ರಸ್ಥಾನಗಳು ೧೯**

ಏಕಂ ಕಪೋಲೇ ಹೃದಯೇ ತ್ರೀಣಿ ಮಧ್ಯೋದರೇ ತಥಾ ।
ಪಂಚ ಪಾರ್ಶ್ವೇ ದ್ವಯಂ ತ್ರೀಣಿ ದಕ್ಷಿಣಸ್ತನಮಂಡಲೇ ॥

ಚಕ್ರದ್ವಯಂ ದಕ್ಷಿಣೇ ತು ಬಾಹೌ ತಿಲಕಮೂರ್ಧನಿ ।
ನ್ಯಸೇದಧಸ್ತಾದೇಕಂ ತು ತಿಲಕೇ ವಾಮಬಾಹುಕೇ ॥
ಕರ್ಣಮೂಲೇ ತಥಾ ಕಂಠೇ ಏಕಮೇಕಂ ತು ಧಾರಯೇತ್ ।

1. ಬಲಭಾಗದ ಕಣ್ಣಿನ ಪಕ್ಕದಲ್ಲಿ ಒಂದು ಚಕ್ರವನ್ನು ಧರಿಸಬೇಕು. 1

2. ಹೃದಯದಲ್ಲಿ ಮೂರು ಚಕ್ರಗಳನ್ನು ಧರಿಸಬೇಕು. 3

3. ಹೊಟ್ಟೆಯ ಮಧ್ಯಭಾಗದ ನಾಮದ ಮೇಲೆ ಐದು ಚಕ್ರಗಳನ್ನು ಧರಿಸಬೇಕು. 5

4. ಹೊಟ್ಟೆಯ ಎಡಭಾಗದಲ್ಲಿ ಎರಡು ಚಕ್ರಗಳನ್ನು ಧರಿಸಬೇಕು. 2

5. ಬಲಭಾಗದ ಸ್ತನದ ಮೇಲೆ ಮೂರು ಚಕ್ರಗಳನ್ನು ಧರಿಸಬೇಕು. 3

6. ಬಲಭುಜದ ಮೇಲಿನ ನಾಮದ ಮೇಲ್ಭಾಗದಲ್ಲಿ ಎರಡು ಚಕ್ರಗಳನ್ನು ಧರಿಸಬೇಕು. 2

7. ಎಡಭುಜದ ನಾಮದ ಮೇಲಿನ ಕೆಳ ಭಾಗದಲ್ಲಿ ಒಂದು ಚಕ್ರವನ್ನು ಧರಿಸಬೇಕು. 1

8. ಬಲಗಿವಿಯ ಕೆಳಭಾಗದಲ್ಲಿ ಕುತ್ತಿಗೆಯ ಮೇಲೆ ಒಂದು ಚಕ್ರವನ್ನು ಧರಿಸಬೇಕು. 1

9. ಕಂಠದಲ್ಲಿ ಒಂದು ಚಕ್ರವನ್ನು ಧರಿಸಬೇಕು. 1

**ಶಂಖದ ಸ್ಥಾನಗಳು ೧೦**

ವಾಮೇ ಕಪೋಲೇ ಶಂಖೈಕಂ ದ್ವಯಂ ಪಾರ್ಶ್ವೇ ತ್ರಯಂ ಸ್ತನೇ ॥
ಶಂಖದ್ವಯಂ ತಥಾ ಬಾಹ್ವೋಃ ವಿನ್ಯಸೇತ್ ಚಕ್ರಮೂರ್ಧನಿ ।

ಬಾಹೌ ತು ತಿಲಕಾಧಸ್ತಾತ್ ದಕ್ಷಿಣೇ ಶಂಖಮೇಕಕಮ್ ।
ಕರ್ಣಮೂಲೇ ತಥಾ ವಾಮೇ ಶಂಖಮೇಕಂ ತು ವಿನ್ಯಸೇತ್ ॥

1. ಎಡಗಣ್ಣಿನ ಪಕ್ಕದಲ್ಲಿ ಮೇಲೆ ಒಂದು ಶಂಖವನ್ನು ಧರಿಸಬೇಕು. 1

2. ಹೊಟ್ಟೆಯ ಎಡಭಾಗದಲ್ಲಿ ಎರಡು ಶಂಖಗಳನ್ನು ಧರಿಸಬೇಕು. 2

3. ಎಡಭಾಗದ ಸ್ತನದ ಮೇಲೆ ಮೂರು ಶಂಖಗಳನ್ನು ಧರಿಸಬೇಕು. 3

4. ಎಡಭುಜದ ನಾಮದ ಮೇಲಿನ ಚಕ್ರದ ಮೇಲ್ಭಾಗದಲ್ಲಿ ಎರಡು ಶಂಖಗಳನ್ನು ಧರಿಸಬೇಕು. 2

5. ಬಲಭಾಗದ ಭುಜದ ನಾಮದ ಮೇಲಿನ ಚಕ್ರದ ಕೆಳಗೆ ಒಂದು ಶಂಖವನ್ನು ಧರಿಸಬೇಕು. 1

6. ಎಡಭಾಗದ ಕಿವಿಯ ಕೆಳಗೆ ಕುತ್ತಿಗೆಯ ಮೇಲೆ ಒಂದು ಶಂಖವನ್ನು ಧರಿಸಬೇಕು. 1

**ಗದೆಯ ಸ್ಥಾನಗಳು ೫**

ಲಲಾಟೇ ತು ಗದಾ ಧಾರ್ಯಾ ವಾಮಪಾರ್ಶ್ವೇ ತಥಾ ಸ್ತನೇ ।
ಬಾಹುಜೇ ತಿಲಕೇ ದ್ವೇ ತು ಶಂಖಾಧೋಭಾಗಭೇದತಃ ॥

1. ಹಣೆಯ ಮೇಲೆ ಒಂದು ಗದೆಯನ್ನು ಧರಿಸಬೇಕು. 1

2. ಹೊಟ್ಟೆಯ ಎಡಭಾಗದಲ್ಲಿ ಒಂದು ಗದೆಯನ್ನು ಧರಿಸಬೇಕು. 1

3. ಎಡಭಾಗದ ಸ್ತನದ ಮೇಲೆ ಒಂದು ಗದೆಯನ್ನು ಧರಿಸಬೇಕು. 1

4. ಎಡಭಾಗದ ಭುಜದ ನಾಮದ ಮೇಲಿನ ಶಂಖಮುದ್ರೆಯ ಕೆಳ ಭಾಗದಲ್ಲಿ ಎರಡು ಗದೆಗಳನ್ನು ಧರಿಸಬೇಕು. 2

**ಪದ್ಮದ ಸ್ಥಾನಗಳು ೬**

ಪದ್ಮಂ ಭಾಗದ್ವಯೇ ವಕ್ಷಸ್ಯಥೋ ಪಾರ್ಶ್ವೇ ತಥಾ ಸ್ತನೇ ।
ಏಕೈಕಂ ದಕ್ಷಿಣೇ ಬಾಹೌ ಚಕ್ರಾಧಸ್ತಾತ್ ದ್ವಯಂ ಲಿಖೇತ್ ॥

1. ಎದೆಯ ನಾಮದ ಮೇಲೆ ಎರಡು ಬದಿಗಳಲ್ಲಿ ಒಂದೊಂದು ಪದ್ಮವನ್ನು ಧರಿಸಬೇಕು. 2

2. ಹೊಟ್ಟೆಯ ಬಲಭಾಗದಲ್ಲಿ ಒಂದು ಪದ್ಮವನ್ನು ಧರಿಸಬೇಕು. 1

3. ಬಲಭಾಗದ ಸ್ತನದ ಮೇಲೆ ಒಂದು ಪದ್ಮವನ್ನು ಧರಿಸಬೇಕು. 1

4) ಬಲಭುಜದ ನಾಮದಲ್ಲಿ ಧರಿಸಿದ ಚಕ್ರಮುದ್ರೆಯ ಕೆಳಭಾಗದಲ್ಲಿ ಎರಡು ಪದ್ಮಗಳನ್ನು ಧರಿಸಬೇಕು. 2

**ಎಲ್ಲ ಕಡೆ ನಾರಾಯಣ ಮುದ್ರೆ**

ನಾಮ ಸರ್ವೇಷು ಪುಂಡ್ರೇಷು ಸ್ತನಯೋಶ್ಚ ಕಪೋಲಯೋಃ ॥

ದ್ವಾದಶಪುಂಡ್ರಗಳಲ್ಲಿ, ಸ್ತನಗಳಲ್ಲಿ ಮತ್ತು ಕಣ್ಣಿನ ಎಡ-ಬಲಭಾಗಗಳಲ್ಲಿ ನಾರಾಯಣಮುದ್ರೆಯನ್ನು ಧರಿಸಬೇಕು.

ಪ್ರಕ್ಷಾಲ್ಯಾಯುಧತೋಯೇನ ಶಿರೋಮೂಲೇನ ಮಾರ್ಜಯೇತ್ ।
ನಮೋ ಮುದ್ರಾಭ್ಯ ಇತ್ಯುಕ್ತ್ವಾ ಸ್ಥಾಪಯೇತ್ ಮಾನಿತಃ ಸದಾ ॥

ಹೀಗೆ ಮುದ್ರಾಮಂತ್ರಗಳನ್ನು ಪಠಿಸುತ್ತಾ ಮುದ್ರೆಗಳನ್ನು ಧರಿಸಬೇಕು. ನಂತರ ಆ ಮುದ್ರೆಗಳನ್ನು ಶುದ್ಧವಾದ ಜಲದಿಂದ ಪ್ರಕ್ಷಾಲನ ಮಾಡಬೇಕು. ಪ್ರಕ್ಷಾಲನ ಮಾಡಿದ ಆ ಜಲವನ್ನು ತಲೆಯಲ್ಲಿ ಧರಿಸಬೇಕು. ''ನಮೋ ಮುದ್ರಾಭ್ಯಃ'' ಎಂದು ಹೇಳಿ ಆ ಮುದ್ರೆಗಳನ್ನು ನಮಸ್ಕರಿಸಿ ಯಥಾಸ್ಥಾನದಲ್ಲಿ ಇರಿಸಬೇಕು. ಯಾವುದೇ ಕಾರಣಕ್ಕಾಗಿ ಅವುಗಳನ್ನು ಕೆಳಗೆ ಇರಿಸಬಾರದು. ಈ ವಿಷಯದಲ್ಲಿ ಜಾಗರೂಕನಾಗಬೇಕು.

## ೭೪. ಮುದ್ರಾಂಕಿತನಾದವನ ನಿಂದೆ ಸಲ್ಲದು

ಅಗ್ನಿಪುರಾಣೇ ದಶರಥೇನ ಸೂಕರಾದಿಬುದ್ಧ್ಯಾ ಶ್ರವಣೇ ವಿದ್ಧೇ ತದಾಜ್ಞಯಾ ಕಮಂಡಲುಮಾದಾಯ ರಾಜ್ಞಾ ತತ್ಪಿತ್ರೋಃ ಪಾನೀಯಾರ್ಪಣೇ ಹಾ ಶ್ರವಣ ! ವಿಲಂಬಿತಂ ಕಿಂ ನ ವದಸಿ ರೇ ಶ್ರವಣ ಇತಿ ಸಘೃಣಮಭಿಲಪ್ಯ ಪತತಿ ಸತಿ, ಚಂಡಾಲೋಽಹಂ ದಶರಥೋ ಬ್ರಹ್ಮಹಂತಾ । ಶ್ರವಣಸ್ತು ಲೋಕಾಂತರೇ ಮಿಲಿಷ್ಯತಿ ಇತಿ ಗರಲತುಲ್ಯಂ ರಾಜವಚನಮಾಕರ್ಣ್ಯ ಸೋರಸ್ತಾಡನಮುಚ್ಚೈರ್ವಿಲಪ್ಯ ಮೂರ್ಛಿತೋಽ-ಚಿರಾತ್ ಪ್ರಬುದ್ಧ್ಯ ದೀರ್ಘಮುಚ್ಛ್ವಸ್ಯ ಶ್ರವಣಪಿತ್ರಾ ಉಕ್ತಮ್-

ಶಿಲಾಬುದ್ಧಿಃ ಕೃತಾ ಕಿಂ ವಾ ಪ್ರತಿಮಾಯಾಂ ಹರೇರ್ಮಯಾ ।
ಕಿಂ ಮಯಾ ಪಥಿ ದೃಷ್ಟಸ್ಯ ವಿಷ್ಣುಭಕ್ತಸ್ಯ ಕರ್ಹಿಚಿತ್ ॥

ತನ್ಮುದ್ರಾಂಕಿತದೇಹಸ್ಯ ಕಿಂ ತಸ್ಯಾನಾದರಃ ಕೃತಃ ।
ಯೇನ ಕರ್ಮವಿಪಾಕೇನ ಪುತ್ರಶೋಕೋ ಮಮೇದೃಶಃ ॥

ಚಕ್ರಾದಿಗಳನ್ನು ಧರಿಸಿದ ವಿಷ್ಣುಭಕ್ತನ ನಿಂದೆಯನ್ನು ಯಾವ ಕಾರಣಕ್ಕಾಗಿಯೂ ಮಾಡಬಾರದು. ಆದರಿಂದ ತಾನು ದುಃಖವನ್ನು ಅನುಭವಿಸಬೇಕಾಗುತ್ತದೆ. ಈ ವಿಷಯವನ್ನು ಆಹ್ನಿಕಕೌಸ್ತುಭದಲ್ಲಿ ಶ್ರೀನಿವಾಸತೀರ್ಥರು ಅಗ್ನಿಪುರಾಣೋಕ್ತವಾದ ಇತಿಹಾಸಪೂರ್ವಕವಾಗಿ ಸ್ಪಷ್ಟಪಡಿಸುತ್ತಾರೆ.

ದಶರಥಮಹಾರಾಜ ಬೇಟೆಯಾಡುವುದಕ್ಕಾಗಿ ವನಕ್ಕೆ ತೆರಳಿದ್ದಾನೆ. ಅವನು ಶಬ್ದವೇಧಿವಿದ್ಯೆಯಲ್ಲಿ ನಿಷ್ಣಾತ. ಆ ವಿದ್ಯೆಯಲ್ಲಿ ಅವನು ಸಿದ್ಧಹಸ್ತ. ಅವನು ಎಲ್ಲಿಯೋ ಇದ್ದಾನೆ. ಜಲಾಶಯದಲ್ಲಿ ಶಬ್ದವಾಗುತ್ತಿದೆ. ಆ ಶಬ್ದವನ್ನು ಕೇಳಿದ. ಸೂಕರಾದಿಪ್ರಾಣಿಗಳು ಬಂದು ಜಲವನ್ನು ಪಾನಮಾಡುವ ಶಬ್ದವಿದೆಂದು ಭ್ರಾಂತನಾದ. ಆ ಪ್ರಾಣಿಯನ್ನು ಸಂಹಾರಮಾಡಲು ಕೃತನಿಶ್ಚಯನಾದ. ಬಾಣವನ್ನು ಪ್ರಯೋಗಿಸಿದ.

ಆದರೆ ಮನುಷ್ಯನ ಆರ್ತನಾದವು ಅಲ್ಲಿಂದ ಕೇಳಿಬಂತು. ಅದನ್ನು ಕೇಳಿ ದಶರಥ ಗಾಬರಿಯಾದ. ತನ್ನ ವಿದ್ಯೆಯನ್ನು ತಾನೇ ಹಳಿದ. ಜಲಾಶಯಕ್ಕೆ ನಡೆದ.

ಅಲ್ಲಿ ಶ್ರವಣ ಎಂಬ ಋಷಿಗಳು ಸಾವಿನ ಅಂಚಿನಲ್ಲಿದ್ದರು. ಆ ಪ್ರಸಂಗದಲ್ಲಿಯೂ ತಮ್ಮ ತಂದೆ-ತಾಯಿಗಳ ಸೇವೆಗಾಗಿ ಕಾತುರರಾಗಿದ್ದರು. ಕಣ್ಣಿಲ್ಲದ ಅವರನ್ನು ಹೊತ್ತುಕೊಂಡು ತೀರ್ಥಯಾತ್ರೆಗೆ ತೊಡಗಿದ್ದರು.

ಪ್ರಕೃತ ತೃಷಾರ್ತರಾದ ಅವರಿಗೆ ಜಲವನ್ನು ಒಯ್ಯುವುದಕ್ಕಾಗಿ ಜಲಾಶಯಕ್ಕೆ ಬಂದಿದ್ದರು. ತಮ್ಮ ಸಾವಿಗಾಗಿ ಅವರು ದುಃಖಪಡುತ್ತಿರಲಿಲ್ಲ. ಇದು ತಮ್ಮ ಪ್ರಾರಬ್ಧವೆಂದು ಅವರು ತಿಳಿದು ಮಾಡಬೇಕಾದ ಕೆಲಸವನ್ನು ದಶರಥ ಮಹಾರಾಜನಿಗೆ ಹೇಳಿದರು.

ರಾಜ ಚಿಂತಿಸಬೇಡ. ಇದು ನನ್ನ ಪ್ರಾರಬ್ಧ. ಸರಿ. ನನ್ನ ತಂದೆ-ತಾಯಿಗಳು ತೃಷಾರ್ತರಾಗಿ ಇದ್ದಾರೆ. ಅವರಿಗೆ ಈ ಜಲವನ್ನು ತಲುಪಿಸು, ಅವರ ಯೋಗಕ್ಷೇಮವನ್ನು ನೋಡು. ಎಂದು ಆಜ್ಞೆ ಮಾಡಿದ. ತನುವನ್ನು ಪರಿತ್ಯಜಿಸಿದ.

ಶ್ರವಣರ ಆಜ್ಞೆಯಿಂದ ಕಲಶವನ್ನು ಹೊತ್ತುಕೊಂಡು ಅವರ ತಂದೆ-ತಾಯಿಗಳಿದ್ದಲ್ಲಿ ಬಂದ ದಶರಥ. ಮಾತನಾಡದೇ ಪಾನೀಯವನ್ನು ಸಮರ್ಪಿಸಿದ.

ಬಂದವನು ಮಗನೇ ಎಂದು ತಿಳಿದ ತಂದೆ-ತಾಯಿಗಳು ಕೇಳಿದರು. ಮಗೂ ಯಾಕೆ ಇಷ್ಟು ತಡವಾಯಿತು. ಯಾಕೆ ನೀನು ಮಾತನಾಡುತ್ತಿಲ್ಲ ಎಂದು.

ದಶರಥ ಸತ್ಯವಕ್ತಾ, ಅವನು ಹೇಳಿದ. ನಾನು ಶ್ರವಣ ಅಲ್ಲ, ದಶರಥ. ನಾನು ಬ್ರಹ್ಮಹತ್ಯಾ ಮಾಡಿದವನು. ಶ್ರವಣಕುಮಾರ ನಿಮಗೆ ಇನ್ನಿಲ್ಲ. ಅವನು ಲೋಕಾಂತರದಲ್ಲಿ ನಿಮಗೆ ಸಿಗುತ್ತಾನೆ. ಎಂಬ ರಾಜನ ವಿಷಪ್ರಾಯವಾದ ವಚನಗಳನ್ನು ಕೇಳುತ್ತಲೇ ಅತಿಯಾದ ವೇದನೆಯಿಂದ ಮೂರ್ಛಿತರಾದರು. ಬಹಳ ಸಮಯ ಕಳೆದ ಮೇಲೆ ಎಚ್ಚತ್ತು ದೀರ್ಘವಾಗಿ ಶ್ವಾಸವನ್ನು ಎಳೆಯುತ್ತಾ ಈ ರೀತಿಯಾಗಿ ವಿಲಾಪಿಸುತ್ತಾ ನುಡಿದರು.

ಶ್ರೀಹರಿಯ ಪ್ರತಿಮೆಯನ್ನು ನೋಡಿ ಇದು ಕೇವಲ ಶಿಲೆ ಎಂದು ನಾನು ಭಾವಿಸಿದ್ದೆನೋ ಏನೋ, ಮಾರ್ಗಮಧ್ಯದಲ್ಲಿ ಕಂಡ ಶ್ರೀಹರಿಯ ಮುದ್ರೆಗಳಿಂದ ಚಿಹ್ನಿತನಾದ ವಿಷ್ಣುಭಕ್ತನಿಗೆ ಸರಿಯಾಗಿ ಆದರವನ್ನು ಮಾಡಲಿಲ್ಲವೋ ಏನೋ. ಇಂತಹ ಯಾವುದೋ ಪಾಪ ಮಾಡಿದ್ದಕ್ಕಾಗಿ ಈಗ ನಾನು ಪುತ್ರಶೋಕವನ್ನು ಅನುಭವಿಸುವಂತಾಯಿತಲ್ಲ ಎಂದು ತನ್ನ ಕರ್ಮವನ್ನು ಹಳಿಯುತ್ತಿದ್ದಾನೆ.

ಇದರಿಂದ ನಾವು ತಿಳಿಯಬೇಕಾದದ್ದೇನೆಂದರೆ ವಿಷ್ಣುವಿನ ಚಿಹ್ನೆಗಳಿಂದ ಯುಕ್ತನಾದ ವಿಷ್ಣುಭಕ್ತನಿಗೆ ಯೋಗ್ಯವಾದ ಆದರವನ್ನು ಮಾಡಲೇಬೇಕು.

ಇದು ಕೇವಲ ಆದರ ಮಾಡದಿದ್ದರೆ ಆಗುವ ಅನರ್ಥ. ಇಂತಹ ವಿಷ್ಣುಭಕ್ತರಿಗೆ ಅವಮಾನವಾಗುವಂತೆ ನಡೆದುಕೊಂಡರೆ ಅದರ ಫಲ ಮತ್ತಿಷ್ಟು ತೀವ್ರವಾಗಿರುತ್ತದೆಂಬುದನ್ನು ಗಮನಿಸಬೇಕು.

ಮತ್ತು "ಗೂಟ ನಾಮವ ಹಚ್ಚಿ" ಎಂದು ದಾಸರು ಹೇಳಿದಂತೆ ವಿಷ್ಣುಭಕ್ತಿ ಇಲ್ಲದೇ ಕೇವಲ ಹೊಟ್ಟೆ ಪಾಡಿಗಾಗಿ ನಾಮವನ್ನು ಹಚ್ಚುವವರು ವಿಷ್ಣುಭಕ್ತರಾಗ-ಲಾರರು. ಅಂಥಹ ವಿಷ್ಣುದ್ವೇಷಿಗಳನ್ನು ಕಂಡು ಸರ್ವಥಾ ಆದರವನ್ನು ಮಾಡಬಾರದು ಎಂಬುದನ್ನೂ **ವಿಷ್ಣುಭಕ್ತಸ್ಯ** ಎಂಬ ಮಾತಿನಿಂದ ಎಚ್ಚರಿಸಿದ್ದಾರೆ. ಇದನ್ನು ಮನಗಾಣಬೇಕು.

**೭೫. ಶ್ರೀಹರಿಯ ಸಾನ್ನಿಧ್ಯ ಎಲ್ಲಿ?**

ಸದಾಚಾರಸ್ಮೃತಿಯ ಪ್ರಕಾಶಿಕಾ ಎಂಬ ವ್ಯಾಖ್ಯಾನವು ವಸಿಷ್ಠರ ವಚನಗಳ ಮೂಲಕ ಮತ್ತೊಂದು ವಿಷಯವನ್ನು ಸ್ಪಷ್ಟಪಡಿಸುತ್ತದೆ. ಆ ವಿಷಯವನ್ನು ಸರಿಯಾಗಿ ಅರಿತುಕೊಳ್ಳಬೇಕು.

ಚಕ್ರಾದಿಚಿಹ್ನಹೀನೇನ ಸ್ಥಾಪಿತೇ ಯಂತ್ರಕರ್ಮಣಿ ।
ನ ಸಾನ್ನಿಧ್ಯಂ ಹರೇರ್ಯಾತಿ ಕ್ರಿಯಾಕೋಟಿಶತೈರಪಿ ॥

ಮನುಷ್ಯರಿಗೆ ಸಮಸ್ಯೆಗಳು ಬಹಳ. ಆ ಎಲ್ಲ ಸಮಸ್ಯೆಗಳು ಹೇಗಾದರಾಗಲಿ ಪರಿಹಾರವಾಗಲಿ ಎಂದು ಎಲ್ಲ ಪ್ರಯತ್ನಗಳನ್ನು ಮಾಡುತ್ತ ಹೋಗುತ್ತಾರೆ. ಅವುಗಳಲ್ಲಿ ಒಂದು ದೈವಿಕ ಪ್ರಯತ್ನ, ಯಂತ್ರಗಳನ್ನು ಕಟ್ಟಿಕೊಳ್ಳುವುದು.

ಇದು ಸೂಕ್ತವಾದ ಉಪಾಯವೇ. ಆದರೆ-

ಯಂತ್ರಗಳನ್ನು ಬರಿಯುವವರು ಕಡ್ಡಾಯವಾಗಿ ವಿಷ್ಣುಭಕ್ತರಾಗಿರಬೇಕು. ಅವರು ವಿಷ್ಣುವಿನ ಚಕ್ರಾದಿಚಿಹ್ನೆಗಳಿಂದ ಯುಕ್ತರಾಗಿರಬೇಕು. ಚಕ್ರಾದಿಚಿಹ್ನೆಗಳಿಂದ ರಹಿತನಾದವನು ಕೋಟಿ-ಕೋಟಿ ಕರ್ಮಕಲಾಪಗಳನ್ನು ಅನುಷ್ಠಾನ ಮಾಡಿ ಯಂತ್ರಗಳನ್ನು ರಚಿಸಿದರೂ ಅಲ್ಲಿ ಭಗವಂತ ಸರ್ವಥಾ ಸನ್ನಿಹಿತನಾಗಲಾರ.

ಅಂತಹ ಯಂತ್ರಗಳು ನಮ್ಮ ಸಮಸ್ಯೆಗಳನ್ನು ಮತ್ತಿಷ್ಟು ಹುಟ್ಟು ಹಾಕುತ್ತವೆಯೇ ಹೊರತು ಪರಿಹರಿಸುವುದಿಲ್ಲ. ಈ ವಿಷಯವನ್ನು ಸರಿಯಾಗಿ ಆಲೋಚನೆ ಮಾಡಿ ನಿರ್ಧಾರ ತೆಗೆದುಕೊಳ್ಳಬೇಕು. ಮತ್ತು ಈ ವಿಷಯದಲ್ಲಿ ವಿಷ್ಣುಭಕ್ತನಾದವನು ನಿಷ್ಠುರನಾಗಬೇಕು. ಇಂತಹ ಕುತಂತ್ರಗಳಿಗೆ ಯಾವ ವೈಷ್ಣವನೂ ಬಲಿಯಾಗಬಾರದು.

ಮತ್ತೊಂದು ವಿಷಯವನ್ನು ಇದೇ ವ್ಯಾಖ್ಯಾನವು ಸ್ಪಷ್ಟಪಡಿಸುತ್ತದೆ.

**ಅವೈಷ್ಣವಸ್ಥಾಪಿತಾನಾಂ ಪ್ರತಿಮಾನಾಂ ಚ ವಂದನಮ್ ।**
**ಯಃ ಕರೋತಿ ಸ ಮೂಢಾತ್ಮಾ ರೌರವಂ ನರಕಂ ವ್ರಜೇತ್ ॥**

ಇವತ್ತು ಬೀದಿ ಬೀದಿಗಳಲ್ಲಿ ದೇವಾಲಯಗಳು ಬೆಳೆಯುತ್ತಿವೆ. ಅಂತಹ ದೇವಾಲಯಗಳಿಗೆ ಸರ್ವಥಾ ಹೋಗಬಾರದು. ಅಲ್ಲಿ ಪರಮಾತ್ಮನ ಸನ್ನಿಧಾನ ಸರ್ವಥಾ ಇರುವುದಿಲ್ಲ. ಕಾರಣ ಈ ರೀತಿಯಾಗಿದೆ.

ಮೇಲೆ ತಿಳಿದಂತೆ ವಿಷ್ಣುಚಿಹ್ನೆಗಳಿಂದ ಯುಕ್ತರಾದ ವಿಷ್ಣುಭಕ್ತರು ಕರೆದಲ್ಲಿ ಭಗವಂತ ಬಂದು ನೆಲೆಸುತ್ತಾನೆ. ಅಂತಹ ವಿಷ್ಣುಭಕ್ತರು ಸ್ಥಾಪನೆಮಾಡಿದ ಪ್ರತಿಮೆಗಳು ಭಗವಂತನ ಸನ್ನಿಧಾನದಿಂದ ಭರಿತವಾಗಿರುತ್ತವೆ. ಆ ಪ್ರತಿಮೆಗಳನ್ನು ದರ್ಶನ ಮಾಡಿಕೊಂಡು ನಮಸ್ಕಾರಾದಿಗಳಿಂದ ಅಲ್ಲಿಯ ದೇವರನ್ನು ಸೇವಿಸಿದವನು ಪುನೀತನಾಗುತ್ತಾನೆ.

ವಿಷ್ಣುಗಳ ಚಿಹ್ನೆಗಳಿಂದ ರಹಿತನಾದ ಅವೈಷ್ಣವನು ಸ್ಥಾಪನೆ ಮಾಡಿದ ಪ್ರತಿಮೆಗಳಿಗೆ ಯಾವನು ವಂದಿಸುತ್ತಾನೋ ಅಂಥವನು ಮೂಢನೇ ಸರಿ. ಅವನಿಗೆ ರೌರವ ನರಕವಾಗುತ್ತದೆ. ಆದ್ದರಿಂದ ಈ ವಿಷಯದಲ್ಲಿ ಸದಾ ಜಾಗರೂಕನಾಗಿ ಸಾಧಕನಾದವನು ಇರಬೇಕು. ಯಾವುದೇ ದೇವಾಲಯಕ್ಕೆ ಹೋಗುವಾಗ ಅಲ್ಲಿಯ ಇತಿಹಾಸವನ್ನು ತಿಳಿದುಕೊಂಡು ಹೋಗಬೇಕು.

ಇಂದು ಸಮಾಜ ದೈವಿಕವಾಗುತ್ತಿದೆ. ಎಲ್ಲರೂ ಸತ್ಕರ್ಮಗಳಲ್ಲಿ ತೊಡಗುತ್ತಿದ್ದಾರೆ. ಸಂತೋಷ. ಅಂತಹ ಸಾಧಕರಿಗೆಲ್ಲ ವಸಿಷ್ಠರು ಹೇಳಿದ ಈ ಕಿವಿಮಾತನ್ನು ಪ್ರಕಾಶಿಕಾಕಾರರು ಉಲ್ಲೇಖಿಸುತ್ತಾರೆ.

ಚಕ್ರಸಂಯುತವಿಪ್ರೋ ಹಿ ತ್ರಿಷು ಲೋಕೇಷು ಪೂಜಿತಃ ।
ತಸ್ಮಾತ್ತು ವೈಷ್ಣವಾ ಏವ ನಿಯೋಜ್ಯಾಃ ಸರ್ವಕರ್ಮಸು ॥

ಮನುಷ್ಯ ಸಾಧಕನಾಗಬೇಕಾದರೆ ಅವನ ಮನಸ್ಸು ಪರಿಶುದ್ಧವಾಗಬೇಕು. ಅದಕ್ಕಾಗಿ ವಿಹಿತವಾದ ಅನೇಕಕರ್ಮಕಲಾಪಗಳನ್ನು ಸಾಧಕನು ಅನುಷ್ಠಾನ ಮಾಡಬೇಕು. ಕರ್ಮಗಳ ಅನುಷ್ಠಾನ ಮಾಡಬೇಕಾದರೆ ಕೇವಲ ನಮ್ಮಿಂದ ಸಾಧ್ಯವಿಲ್ಲ. ಅದಕ್ಕೆ ಪುರೋಹಿತರ ಸಹಾಯ ಅತ್ಯಂತ ಆವಶ್ಯಕ. ಯಾರಾದರೇನು ? ಎಂದು ಯಾರಿಗೋ ಪೌರೋಹಿತ್ಯವನ್ನು ಒಪ್ಪಿಸುವುದು ಸೂಕ್ತವಾಗುವುದಿಲ್ಲ. ಆ ಕರ್ಮಗಳಿಗಾಗಿ ಸರಿಯಾದ ಪುರೋಹಿತರನ್ನು ನಿಯೋಜಿಸಬೇಕು. ಪುರೋಹಿತರಿಗೆ ಕರ್ಮಕಲಾಪದ ಪರಿಚಯ ಸರಿಯಾಗಿರಬೇಕು. ಎಲ್ಲದಕ್ಕಿಂತಲೂ ಪ್ರಧಾನವಾಗಿ ಅವರಿಗಿರಬೇಕಾದ ಗುಣವೆಂದರೆ ವಿಷ್ಣುಭಕ್ತಿ. ವಿಷ್ಣುಭಕ್ತರಾದ ವಿಷ್ಣುವಿನ ಚಿಹ್ನೆಗಳನ್ನು ಆದರದಿಂದ ಧರಿಸುವ ಪುರೋಹಿತರು ಎಲ್ಲರಿಗೂ ಹಿತಕಾರಕರಾಗುತ್ತಾರೆ. ಚಕ್ರಾದಿಚಿಹ್ನೆಗಳನ್ನು ಧರಿಸಿದ ವ್ಯಕ್ತಿಯು ಮೂರುಲೋಕ-ದಲ್ಲಿಯೂ ಪೂಜ್ಯನಾಗುತ್ತಾನೆ. ಇಂತಹ ಪುರೋಹಿತರು ಆಡಿದ ಮಾತು ಸತ್ಯವಾಗುತ್ತದೆ. ಇವರ ದಿಗ್ದರ್ಶನದಿಂದ ಕರ್ಮಗಳನ್ನು ಮಾಡುತ್ತಿದ್ದರೆ ಆ ಪುರೋಹಿತನ ಮೇಲಿನ ಗೌರವಭಾವದಿಂದ ದೇವತೆಗಳು ಯಜಮಾನನ ಕರ್ಮಗಳನ್ನು ಸ್ವೀಕರಿಸಿ ಯಥೋಕ್ತವಾದ ಫಲವನ್ನು ನೀಡಲು ಮುಂದಾಗುತ್ತಾರೆ. ಆದ್ದರಿಂದ ಸಕಲಕರ್ಮಗಳಲ್ಲಿ ಇಂತಹ ಪುರೋಹಿತರನ್ನೇ ಎಲ್ಲರೂ ಬಯಸಬೇಕು. ಹೊರತು ವಿಷ್ಣುಭಕ್ತಿ ಇಲ್ಲದವರನ್ನಲ್ಲ.

**೨೬. ಅಂಗಾರಧಾರಣೆಯ ವಿಧಾನ**

ಅಂಗಾರವನ್ನು ಧರಿಸುವ ವಿಷಯವನ್ನು ಕೃಷ್ಣಾಮೃತಮಹಾರ್ಣವದಲ್ಲಿಯ ವಚನವು ಈ ರೀತಿಯಾಗಿ ತಿಳಿಸುತ್ತದೆ. ಈ ವಚನವನ್ನು ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯರು ಮಾತ್ರ ಉದಾಹರಿಸಿದ್ದಾರೆ. ಮತ್ತು ಇದಕ್ಕೆ ವ್ಯಾಖ್ಯಾನವನ್ನೂ ಬರೆದಿದ್ದಾರೆ.

ವಿಷ್ಣೋರಂಗಾರಶೇಷೇಣ ಯೋಽಂಗಾನಿ ಪರಿಮಾರ್ಜಯೇತ್ ।
ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಖಂಡಶಃ ॥

ವಿಷ್ಣುವಿನ ಅಂಗಾರದ ಶೇಷದಿಂದ ಯಾರು ತನ್ನ ಅಂಗಗಳಲ್ಲಿ ಪುಂಡ್ರವನ್ನು ಧರಿಸುತ್ತಾರೆಯೋ ಅವರ ದುರಿತಗಳೆಲ್ಲ ದೂರವಾಗುತ್ತವೆ. ಅವರ ವ್ಯಾಧಿಗಳ ಪರಿಹಾರವಾಗುತ್ತವೆ.

ಕೃಷ್ಣಾಚಾರ್ಯರು ತಮ್ಮ ಸ್ಮೃತಿಮುಕ್ತಾವಲೀ ಗ್ರಂಥದಲ್ಲಿ ಸಂಗ್ರಹದಲ್ಲಿಯ ಪ್ರಮಾಣವನ್ನು ಉದಾಹರಿಸುತ್ತಾ ಅಂಗಾರಧಾರಣದ ಸ್ಥಾನವನ್ನು ತಿಳಿಸುತ್ತಾರೆ.

**ಅಥ ಲಲಾಟೋರ್ಧ್ವಪುಂಡ್ರಮಧ್ಯೇಽಂಗಾರಧಾರಣಂ ಕಾರ್ಯಮ್ । ತದುಕ್ತಂ ಸಂಗ್ರಹೇ-**

ಹಣೆಯಲ್ಲಿ ಧರಿಸಿದ ಊರ್ಧ್ವಪುಂಡ್ರದ ಮಧ್ಯದಲ್ಲಿ ಅಂಗಾರವನ್ನು ಧರಿಸಬೇಕು. ಸಂಗ್ರಹದಲ್ಲಿಯ ವಚನವಿದು-

**ವಿಷ್ಣೋರಂಗಾರಶೇಷೇಣ ಊರ್ಧ್ವಪುಂಡ್ರಾಂತರೇ ತು ಯಃ ।**
**ಕರೋತಿ ತೀರ್ಥತೋ ಭಕ್ತ್ಯಾ ಸ ಯಾತಿ ಹರಿಮಂದಿರಮ್ ॥**
**ವಿಷ್ಣುದೇವಸ್ಯ ಹೋಮಸ್ಯ ವಿಷ್ಣೋರಂಗಾರಮೇವ ಚ ।**
**ಊರ್ಧ್ವಪುಂಡ್ರಾಂತರೇ ಕೃತ್ವಾ ಊರ್ಧ್ವಂ ವಿಷ್ಣುಪದಂ ವ್ರಜೇತ್ ॥**
**ಶಾಂತಾಂಗಾರಂ ಲಲಾಟಾಗ್ರೇ ಧಾರಯೇದ್ವಿಷ್ಣುತತ್ಪರಃ ॥ ಸ್ಮೃ.ಮು**

ಅಂಗಾರ ವಿಷ್ಣುವಿಗೆ ತೋರಿಸಿದ ಧೂಪದ್ದಾದರೂ ಸರಿ, ವಿಷ್ಣೂದ್ದೇಶಕವಾದ ಹೋಮದ ಶೇಷವಾಗಿದ್ದರೂ ಸರಿ. ಶಾಂತವಾದ ಆ ಅಂಗಾರವನ್ನು ಊರ್ಧ್ವಪುಂಡ್ರದ ಮಧ್ಯದಲ್ಲಿ ವಿಷ್ಣುತತ್ಪರನಾಗಿ ಧರಿಸಬೇಕು. ಹೀಗೆ ಧರಿಸುವುದರಿಂದ ಊರ್ಧ್ವಲೋಕವಾದ ವೈಕುಂಠಾದಿಗಳನ್ನು ಸೇರಿ ಸುಖಿಸುತ್ತಾನೆ.

### ೭೭. ಎಷ್ಟು ಕಡೆ ಧರಿಸಬೇಕು

ಮೇಲಿನ ಪ್ರಮಾಣವನ್ನು ನೋಡಲಾಗಿ ಅಂಗಾರವನ್ನು ಹಣೆಯಲ್ಲಿ ಮಾತ್ರ ಧರಿಸಬೇಕೆಂದು ತೋರುತ್ತದೆ. ಆದರೆ ಕೃಷ್ಣಾಚಾರ್ಯರೇ ತಮ್ಮ ಕೃಷ್ಣಾಮೃತಮಹಾರ್ಣವವ್ಯಾಖ್ಯಾನದಲ್ಲಿ ''ವಿಷ್ಣೋರಂಗಾರಶೇಷೇಣ ಯೋಽಂಗಾನಿ'' ಎಂಬ ಪ್ರಮಾಣವನ್ನು ಉದಾಹರಿಸಿ ''ಅಂಗಾನಿ'' ಎನ್ನುವುದಕ್ಕೆ

''ಲಲಾಟಾದ್ಯಂಗಾನಿ'' ಎಂದು ಅರ್ಥೈಸಿದ್ದಾರೆ. ಇಲ್ಲಿಯ ಆದಿಪದದಿಂದ ಮತ್ತು ಬಹುವಚನದಿಂದ ಲಲಾಟಾದಿ ದ್ವಾದಶಾಂಗಗಳಲ್ಲಿ ಅಂಗಾರವನ್ನು ಧರಿಸಬೇಕೆಂಬುದು ಅವರಿಗೆ ಅಭಿಪ್ರೇತವೆಂದು ಸ್ಪಷ್ಟವಾಗುತ್ತದೆ.

ನಿರವಕಾಶವಾದ ಮೂಲ ಹಾಗೂ ವ್ಯಾಖ್ಯಾನದ ವಚನಗಳಿಗೆ ಅನುಗುಣವಾಗಿ ಊರ್ಧ್ವಪುಂಡ್ರವನ್ನು ಧರಿಸಿದ ಎಲ್ಲ ಸ್ಥಳಗಳಲ್ಲಿಯೂ ಅಂಗಾರವನ್ನು ಧರಿಸಬೇಕು.

**೭೮. ಪುಂಡ್ರಧಾರಣೆ ನಿತ್ಯ**

ಉಪವೀತಾದಿವದ್ಧಾರ್ಯಾ ಶಂಖಚಕ್ರಾದಯಸ್ತಥಾ ।
ಬ್ರಾಹ್ಮಣಸ್ಯ ವಿಶೇಷೇಣ ಕ್ಷತ್ರಿಯಸ್ಯ ವಿಶೇಷತಃ ॥

ಅತ್ರೋಪವೀತಾದಿವದಿತ್ಯನೇನ ಯಥೋಪವೀತಂ ನಿತ್ಯಂ ಧಾರ್ಯಂ ತಥಾ ಶಂಖಚಕ್ರಾದಿಕಮಪಿ ನಿತ್ಯಂ ಧಾರ್ಯಮ್ ।

ಶಂಖ-ಚಕ್ರಾದಿಗಳನ್ನು ಯಜ್ಞೋಪವೀತದಂತೆ ಧರಿಸಬೇಕು. ಅರ್ಥಾತ್ ಉಪವೀತವು ಹೇಗೆ ನಿತ್ಯವೂ ಧಾರ್ಯವೋ ಹಾಗೆ ನಿತ್ಯವೂ ತಪ್ಪದೇ ಶಂಖ-ಚಕ್ರಗಳನ್ನು ಧರಿಸಬೇಕೆಂದು ತಾತ್ಪರ್ಯ.

**೭೯. ಪ್ರಾಣಪ್ರತಿಷ್ಠೆಯ ಆವಶ್ಯಕತೆ**

ಪ್ರಾಣಪ್ರತಿಷ್ಠಾಮಂತ್ರಂ ವಾ ನ್ಯಸ್ಯ ಜಪ್ತ್ವಾ ತು ಧಾರಯೇತ್ ।
ನಾನ್ಯಥಾ ತು ಫಲಾವಾಪ್ತಿಃ ಕೃತಂ ಕರ್ಮ ವೃಥಾ ಭವೇತ್ ॥

ಇತಿ ಹಾರೀತಃ ॥ ಸ.ದ

ಚಕ್ರಾದಿಗಳನ್ನು ಧರಸುವಾಗ ಮುದ್ರೆಗಳಲ್ಲಿ ಪ್ರಾಣಪ್ರತಿಷ್ಠಾಮಂತ್ರವನ್ನು ಜಪಿಸಿ ಅವುಗಳಿಂದ ಮುದ್ರೆಗಳನ್ನು ಧರಿಸಬೇಕು. ಇಲ್ಲದೇ ಹೋದರ ಯೋಗ್ಯವಾದ ಫಲವು ದೂರಯುವುದಿಲ್ಲ.

**೮೦. ಮುದ್ರೆಗಳು ಯಾವ ಲೋಹದ್ದಾಗಿರಬೇಕು**

ತಪ್ತಮುದ್ರಾಧಾರಣೆಯ ಪ್ರಸಂಗದಲ್ಲಿ ಮುದ್ರೆಗಳು ಯಾವ ಲೋಹದ್ದಾಗಿರಬೇಕೆಂಬುದನ್ನು ತಿಳಿಸುವ ಸದಾಚಾರದರ್ಪಣದಲ್ಲಿಯ ವರಾಹವಚನ ಈ ರೀತಿಯಾಗಿದೆ-

ಸುದರ್ಶನಂ ಪಾಂಚಜನ್ಯಂ ಸೌವರ್ಣೇನ ಪ್ರಕಾರಯೇತ್ ।
ರೌಪ್ಯೇಣೈವ ಚ ತಾಮ್ರೇಣ ಕಾಂಸ್ಯೇನಾಪಿ ಪ್ರಕಾರಯೇತ್ ॥
ಅನ್ಯೈರ್ನ ದಾಹಯೇದ್ಗಾತ್ರಂ ಬ್ರಾಹ್ಮಣೋ ಹರಿಲಂಘನಾತ್ ॥ ಪ.ದ

ಸುದರ್ಶನಚಕ್ರ ಮತ್ತು ಪಾಂಚಜನ್ಯಶಂಖ ಬಂಗಾರದಿಂದ, ಬೆಳ್ಳಿಯಿಂದ, ತಾಮ್ರದಿಂದ ಅಥವಾ ಕಂಚಿನಿಂದ ಮಾಡಿಸಬೇಕು. ಇತರ ಲೋಹದಿಂದ ತಯಾರಾದ ಚಕ್ರಾದಿಗಳನ್ನು ಉಪಯೋಗಿಸುವುದು ಯುಕ್ತವಾಗುವುದಿಲ್ಲ. ಹೀಗೆ ಮಾಡಿದರೆ ಶ್ರೀಹರಿಯ ಶಾಸನೆಯನ್ನು ಉಲ್ಲಂಘಿಸಿದಂತಾಗುತ್ತದೆ.

ಗೋಪೀಚಂದನದಿಂದ ಧರಿಸಬೇಕಾದರೂ ಇದೇ ಲೋಹದ ಮುದ್ರೆಗಳನ್ನು ಉಪಯೋಗಿಸಬೇಕು.

### ೮೧. ಸ್ತ್ರೀಯರ ನಾಮಧಾರಣೆ

ಊರ್ಧ್ವಪುಂಡ್ರಂ ಲಲಾಟೇ ಚ ಮೃದಾ ಶುಭ್ರೇಣ ಧಾರಯೇತ್ ।
ಕಸ್ತೂರ್ಯಾ ಕುಂಕುಮೇನಾಽಪಿ ಚಂದನೇನಾಥವಾ ಸದಾ ॥ ಸ್ಮೃ.ಮು
ರಮ್ಯಂ ಋಜುತರಂ ಸೌಮ್ಯಂ ಊರ್ಧ್ವಪುಂಡ್ರಂ ತು ಧಾರಯೇತ್ ॥

ಕೇಶವಾದಿ ನಾಮತ್ರಯಗಳಿಂದ ಆಚಮನ ಮಾಡಿ ಮುಂಗೈಯ ಮೇಲೆ ಹೆಬ್ಬೆರಳಿನ ಕೆಳಭಾಗದಲ್ಲಿ ಗೋಪೀಚಂದನವನ್ನು ತೇಯಬೇಕು. ಊರ್ಧ್ವಪುಂಡ್ರ ಸೌಮ್ಯವಾಗಿರುವಂತೆ ಹಣೆಯಮೇಲೆ ಧರಿಸಬೇಕು. ಘೋರವಾಗಿರಬಾರದು.

ಯೋಷಿತ್ ಸ್ಮರೇದ್ದೇವಂ ಕೇಶವಂ ಫಾಲದೇಶಕೇ ॥ ಸ್ಮೃ.ಮಾ.ಸಂ

ಸ್ತ್ರೀಯರು ಗೋಪೀಚಂದನದಿಂದ, ಕುಂಕುಮಾದಿಗಳಿಂದ ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸುವಾಗ 'ಕೇಶವಾಯ ನಮಃ' ಎಂಬ ಮಂತ್ರವನ್ನು ಹೇಳುತ್ತಾ ಧರಿಸಬೇಕು. ಆ ಪುಂಡ್ರದ ಮೇಲೆ ಗದಾಮುದ್ರೆಯನ್ನು ಧರಿಸಬೇಕು. ಅದರ ಮೇಲೆ ನಾರಾಯಣಮುದ್ರೆಯನ್ನು ಧರಿಸಬೇಕು. ನಂತರ ಕುಂಕುಮವನ್ನು ಹಚ್ಚಿಕೊಳ್ಳಬೇಕು.

ಶಂಖಚಕ್ರೋರ್ಧ್ವಪುಂಡ್ರಾದ್ಯೈಃ ದಾಸವೇಷಂ ವಿಧಾಯ ಚ ।
ಶಶ್ವತ್ತು ದೇವದೇವೇಶಂ ಭಕ್ತ್ಯಾ ಪರಿಚರೇದ್ಧರಿಮ್ ॥ ಬೃ.ಬ್ರ.ಸಂ

ಶಂಖ, ಚಕ್ರ, ಊರ್ಧ್ವಪುಂಡ್ರ ಮೊದಲಾದ ಚಿಹ್ನೆಗಳಿಂದ ಭಗವಂತನ ದಾಸ ನಾನೆಂಬುದನ್ನು ತೋರಿಸಿಕೊಳ್ಳಬೇಕು. ಸಕಲದೇವತೆಗಳಿಗೆ ಉತ್ತಮನಾಗಿರುವ ಭಗವಂತನನ್ನು ಭಕ್ತಿಯಿಂದ ಪರಿಚರಿಸಬೇಕು. ನಂತರ ದೇವರಿಗಾಗಿ ತಾನು ಮಾಡುವ ಅಡಿಗೆ ಮೊದಲಾದ ಕರ್ಮಗಳಲ್ಲಿ ತೊಡಗಬೇಕು.

ಪುಂಡ್ರದ ವಿಷಯದಲ್ಲಿ ವಿಷ್ಣುರಹಸ್ಯ ಇನ್ನೂ ಹೆಚ್ಚಿನ ವಿಷಯಗಳನ್ನು ಅರುಹುತ್ತದೆ.

ಗೋಪೀಚಂದನಪುಂಡ್ರಂ ಚ ಸ್ತ್ರೀಣಾಂ ಧರ್ಮಃ ಸನಾತನಃ ।
ಪುಂಡ್ರಹೀನೇ ತು ನಾರೀಣಾಂ ಪತ್ಯುರಾಯುಃ ಕ್ಷಯೋ ಭವೇತ್ ॥

ಊರ್ಧ್ವಪುಂಡ್ರಂ ವಿನಾ ನಾರೀ ಯಜ್ಞಸ್ಯಾಂತಂ ಕರೋತಿ ಯಾ ।
ನ ಗೃಹ್ಣಾತಿ ಹರಿಸ್ತಸ್ಯಾ ಗೃಹ್ಣಂತಿ ಬ್ರಹ್ಮರಾಕ್ಷಸಾಃ ॥

ಕಂಚುಕಂ ಕಂಠಸೂತ್ರಂ ಚ ಲಲಾಟೇ ಚೋರ್ಧ್ವಪುಂಡ್ರಕಮ್ ।
ತಪ್ತಚಕ್ರಂ ತಥಾ ಶಂಖಂ ಯಸ್ಯಾ ಗಾತ್ರೇ ನ ವಿದ್ಯತೇ ॥

ಹವ್ಯಂ ಕವ್ಯಂ ತಯಾ ಸ್ಪೃಷ್ಟಂ ದೇವಾಶ್ಚ ಪಿತರೋಽಪಿ ಚ ।
ನೈವ ಗೃಹ್ಣಂತಿ ಕುಪಿತಾಃ ............ ॥ ವಿ.ರ

ಗೋಪೀಚಂದನದಿಂದಲೇ ಊರ್ಧ್ವಪುಂಡ್ರವನ್ನು ಧರಿಸಬೇಕು. ಇದು ಮಹಿಳೆಯರ ಸನಾತನವಾದ ಧರ್ಮ. ಈ ಧರ್ಮದ ಪಾಲನೆಯಿಂದ ಮಹಿಳೆ ಸೌಭಾಗ್ಯವತಿಯಾಗುತ್ತಾಳೆ. ಗೋಪೀಚಂದನನವನ್ನು ಧರಿಸಿ ಸತ್ಕರ್ಮಗಳನ್ನು ಆಚರಿಸಿದರೆ ಅತಿ ಸಣ್ಣ ಕರ್ಮವೂ ಪರಿಪೂರ್ಣವಾಗುತ್ತದೆ. ಹೇರಳವಾದ ಫಲವನ್ನು ತಂದು ಕೊಡುತ್ತದ. ಪುಂಡ್ರ ಧರಿಸದೇ ಎಷ್ಟೇ ಹಿರಿದಾದ ಕರ್ಮ ಮಾಡಿದರೂ ಅದನ್ನು ಹರಿ ಸ್ವೀಕರಿಸಲಾರ. ಬ್ರಹ್ಮರಾಕ್ಷಸರು ಆ ಪುಣ್ಯಕರ್ಮವನ್ನು ಅಪಹರಿಸುತ್ತಾರೆ. ಹೀಗಾಗಿ ಯಾವ ಫಲವೂ ದೊರೆಯುವುದಿಲ್ಲ. ಅಲ್ಲದೇ ಅನರ್ಥವೂ ತಪ್ಪಿದ್ದಲ್ಲ. ಇದು ನಿಶ್ಚಿತ.

ವಿಹಿತವಾದ ಕಾಲದಲ್ಲಿ ತಮ್ಮ ತಮ್ಮ ಮಠದ ಗುರುಗಳ ಹತ್ತಿರ ಹೋಗಿ ತಪ್ತಮುದ್ರೆಯನ್ನೂ ಸ್ವೀಕರಿಸಬೇಕು. ಇದರಿಂದ ಗಾತ್ರಶುದ್ಧಿಯಾಗುತ್ತದೆ.

ಮಂಗಳಸೂತ್ರವನ್ನು ತಪ್ಪದೇ ಯಾವಾಗಲೂ ಧರಿಸಿರಬೇಕು. ಹಲವರು ಅದನ್ನು ತೆಗೆದಿಡುತ್ತಾರೆ. ಆ ಪದ್ಧತಿ ಸರಿಯಾದುದಲ್ಲ.

ರವಿಕೆ, ಸೀರೆ ಇದು ಭಾರತೀಯನಾರಿಯರ ವಸ್ತ್ರ. ಈ ವಸ್ತ್ರವನ್ನು ಬಿಟ್ಟು ಬೇರೇ ವಸ್ತ್ರಗಳನ್ನು ಎಂದಿಗೂ ಧರಿಸಬಾರದು.

ಮಂಗಳಸೂತ್ರ-ರವಿಕೆ-ಸೀರೆ- ಹೇಗೆ ನಿತ್ಯವಾಗಿವೆಯೋ ಹಾಗೆ ಗೋಪೀಚಂದನಧಾರಣೆಯೂ ನಿತ್ಯವಾಗಿದೆ.

ಪುಂಡ್ರದ ವಿಷಯವನ್ನು ಶ್ರೀಪ್ರಾಣೇಶದಾಸರು ತಮ್ಮ ಪಂಚಭೇದ ಸುಳಾದಿಯಲ್ಲಿ ಸರಸವಾಗಿ ಸಂಗ್ರಹಿಸಿದ್ದಾರೆ. ಅದೇ ಸುಳಾದಿ ಇದು-

**ಭಾಮಿನಿಯು ಅಜ್ಞಾನದಿಂ ಪುಂಡ್ರ ಧರಿಸದಲೆ**
**ಹೋಮಾರ್ಥವಾಗಿ ಪಾಕವ ಮಾಡಲೂ ।**
**ಆ ಮಹತ್ಪಾಪಕೇನೆಂಬೆ ವಿಷ್ಟಸಮಾನ್ನ**
**ಈ ಮರ್ಮವರಿಯದುಂಡವಗೆ ನರಕ**
**ಸ್ತ್ರೀ ಪುರುಷರೆಲ್ಲ ಧರಿಸುವುದು ವಿವರವ**
**ತಿಳಿದು ಪಾಪಿ ಹೆಂಗಸು ಆವಳಾದರನ್ನಾ**
**ಗೋಪಿಚಂದನ ಗದಾ ಫಣೆಗೆ ಧರಿಸದಲಿದ್ದ-**
**ರಾಪುರುಷನಳಿದು ದುಃಖವ ಪಡುವಳು ॥**

ತಿಳಿಯದೇ ಮಾಡಿದರೂ ಪಾಪ ಪಾಪವೇ. ತಿಳಿಯದೇ ಮಾಡಿದ್ದೇನೆ. ಈ ಪಾಪದ ಲೇಪವಿಲ್ಲ ಎಂದು ಸಮಾಧಾನ ಪಡುವ ಹಾಗಿಲ್ಲ. ಅಜ್ಞಾನದಿಂದ ಪುಂಡ್ರವನ್ನು ಮುದ್ರೆಯನ್ನು ಧರಿಸದೇ ಎಷ್ಟೇ ಶುದ್ಧಿಯಿಂದ ಅಡಿಗೆಯನ್ನು ಮಾಡಿದರೂ ಅದು ದೇವರ ನೈವೇದ್ಯಕ್ಕೆ, ಹೋಮಕ್ಕೆ ಅರ್ಹವಾಗುವುದಿಲ್ಲ. ನೈವೇದ್ಯ ಮಾಡಿದರೂ ಹರಿ ಅದನ್ನು ಸ್ವೀಕರಿಸುವದಿಲ್ಲ. ಅದನ್ನುಂಡ ನರಗೆ ನರಕ ತಪ್ಪಿದ್ದಲ್ಲ. ಪುಂಡ್ರವನ್ನು ಧರಿಸುವುದರಿಂದ ಪಾಪಗಳ ಪರಿಹಾರವೂ ಆಗುತ್ತದೆ. ದಾಂಪತ್ಯ ಚಿರಕಾಲವೂ ಸರಸವಾಗಿರುತ್ತದೆ.

ಹಲವು ದೇಶಗಳಲ್ಲಿ ಸುಮಂಗಲಿಯರಾದ ಸ್ತ್ರೀಯರು ಗೋಪೀಚಂದನ-ವನ್ನು ಮುಟ್ಟಲೂ ಬಾರದೆಂದು ತಿಳಿದಿದ್ದಾರೆ. ಅದನ್ನು ವಿಧವೆಯರು ಮಾತ್ರ

ಧರಿಸಬೇಕೆಂಬ ಆಚಾರವನ್ನು ಇಟ್ಟುಕೊಂಡಿದ್ದಾರೆ. ಅದು ಸರಿಯಾದ ಆಚಾರವಲ್ಲ.

ಸುಮಂಗಲಿಯರು ಕೇವಲ ಗೋಪೀಚಂದನವನ್ನು ಧರಿಸಬಾರದು. ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸಿ ಅದರಮೇಲೆ ಕುಂಕುಮವನ್ನು ಧರಿಸಬೇಕು.

ನಿಷೇಧವಾಕ್ಯಗಳಿಲ್ಲದಿದ್ದುದರಿಂದ ಮತ್ತು ಅಂತ್ಯಜ-ಚಾಂಡಾಲಾದಿಗಳಿಗೂ ಊರ್ಧ್ವಪುಂಡ್ರಧಾರಣೆ ವಿಹಿತವಾದದ್ದರಿಂದ ಅವಿವಾಹಿತರಾದ ಕನ್ಯೆಯರು ಕೂಡಾ ಗೋಪೀಚಂದನದಿಂದ ಹಣೆಯಲ್ಲಿ ಊರ್ಧ್ವಪುಂಡ್ರ ಧರಿಸಿ ಅದರ ಮೇಲೆ ಕುಂಕುಮವನ್ನು ಧರಿಸಬಹುದು.

ವಿಧವೆಯರು ಕೇವಲ ಗೋಪೀಚಂದನವನ್ನು ಧರಿಸಬೇಕು. ಕುಂಕುಮವನ್ನು ಧರಿಸಬಾರದು. ಈ ನಿಯಮವನ್ನು ಪಾಲಿಸಬೇಕು.

ಸುಮಂಗಲಿಯರಾದ, ಪತಿವ್ರತೆಯರಾದ ಶಚೀ ಮೊದಲಾದ ದೇವತಾ-ಸ್ತ್ರೀಯರು ಕೂಡಾ ಗೋಪೀಚಂದನವನ್ನು ಧರಿಸುತ್ತಾರೆಂಬ ಪುರಾವೆಯನ್ನು ಶ್ರೀಪ್ರಾಣೇಶದಾಸರು ತಮ್ಮ ಈ ಸುಳಾದಿಯಲ್ಲಿ ತಿಳಿಸುತ್ತಾರೆ. ಆದ್ದರಿಂದ ಇದು ಸುಮಂಗಲಿಯರ ಸದಾಚಾರವೆಂದು ತಿಳಿಯಬೇಕು. ಹೆಚ್ಚಿನ ವಿಷಯಗಳು ಈ ಸುಳಾದಿಯಲ್ಲಿಯೇ ಇವೆ. ಅದನ್ನು ನೋಡಿ.

ಶಚಿಯೆ ಮೊದಲಾದ ನಿರ್ಜರರ ಹೆಂಡರು ಪುಂಡ್ರ
ಶುಚಿ ಮನದಿ ಧರಿಸಿ ಸ್ವಪತಿಗಳ ಸಹಿತಾ ।
ಅಚಲಿತ ಸುಮಾಂಗಲ್ಯಯೈದಿ ಸ್ಥಳದಲ್ಲಿ
ಮುಚುಕುಂದವರದನಾರಾಧಿಸುವರು ॥

ಶಚಿ ಮೊದಲಾದ ದೇವತಾಸ್ತ್ರೀಯರು ಕೂಡಾ ಶುದ್ಧಮನಸ್ಕರಾಗಿ ಗೋಪೀಚಂದನವನ್ನು ಧರಿಸುವುದರಿಂದಲೇ ಅವರವರ ಪತಿಗಳ ಪ್ರೀತಿಗೆ ಪಾತ್ರರಾಗಿದ್ದಾರೆ. ಗೋಪೀಚಂದನವನ್ನು ಧರಿಸುವುದರಿಂದಲೇ ಅವರಿಗೆ ತಮ್ಮ ತಮ್ಮ ಪತಿಗಳ ವಿಯೋಗ ಎಂದೆಂದಿಗೂ ಆಗುವುದಿಲ್ಲ. ಆದ್ದರಿಂದ ಪುಂಡ್ರಧಾರಣೆ ಮಹಿಳೆಯರಿಗೆ ಅತ್ಯಂತ ಅನಿವಾರ್ಯ.

### ೮೨. ಪುಂಡ್ರಧಾರಣೆಗೆ ವಿಹಿತ ದ್ರವ್ಯ

ಪುಂಡ್ರಕ್ಕೆ ವಿಹಿತವಾದ ದ್ರವ್ಯ ಯಾವುದು ? ಈ ವಿಷಯವನ್ನು ಹಿಂದೆ ತಿಳಿದಿದ್ದೇವೆ. ಪ್ರಕೃತ ಸ್ತ್ರೀಯರ ಪ್ರಸಂಗದಲ್ಲಿಯೂ ಇದೇ ವಿಷಯವನ್ನು ನಿಖರವಾಗಿ ತಿಳಿಸುವ ಸ್ಮೃತಿಯ ವಚನವು ಹೀಗಿದೆ-

ಪುಂಡ್ರಂ ಸಮೃತ್ತಿಕಾಂ ತ್ಯಕ್ತ್ವಾ ಅನ್ಯದ್ರವ್ಯೇಣ ಧಾರಣಮ್ ।
ಸುವಾಸಿನ್ಯಾ ಮುಖಂ ದೃಷ್ಟ್ವಾ ಆದಿತ್ಯಮವಲೋಕಯೇತ್ ॥

ಪುಂಡ್ರಧಾರಣೆಗೆ ವಿಹಿತವಾದ ಮೃತ್ತಿಕೆಗಳಲ್ಲಿ ಅತಿ ಪ್ರಶಸ್ತವಾದುದು ಗೋಪೀಚಂದನ. ಅದು ಸಿಗದಿದ್ದ ಪಕ್ಷದಲ್ಲಿ ತುಳಸೀ ವನ, ಶ್ರೀರಂಗ, ಶ್ರೀಕೂರ್ಮ, ಸಿಂಹಾದ್ರಿ, ಪ್ರಯಾಗ, ಶ್ರೀಮುಷ್ಣ ಮೊದಲಾದ ವಿಷ್ಣುಕ್ಷೇತ್ರಗಳಲ್ಲಿಯ ಶುದ್ಧವಾದ ಮೃತ್ತಿಕೆಯನ್ನು ಬಳಿಸಬೇಕು. ಇದರ ಹೊರತು ಬೇರೆ ದ್ರವ್ಯಗಳಿಂದ ಸರ್ವಥಾ ಪುಂಡ್ರಧಾರಣೆ ಸಲ್ಲದು. ವಿಹಿತವಲ್ಲದ ದ್ರವ್ಯಗಳಿಂದ ಪುಂಡ್ರವನ್ನು ಧಾರಣೆ ಮಾಡಿದವರ ಮುಖವನ್ನು ನೋಡಕೂಡದು. ಆಕಸ್ಮಾತ್ತಾಗಿ ನೋಡಿದ್ದೇ ಆದರೆ ಆದಿತ್ಯನ ದರ್ಶನವೇ ಅದಕ್ಕೆ ಪ್ರಾಯಶ್ಚಿತ್ತ. ಹೀಗಾಗಿ ಈ ವಿಷಯದಲ್ಲಿ ಬಹು ಜಾಗರೂಕರಾಗಿರಬೇಕು.

### ೮೩. ಸ್ತ್ರೀಯರಿಗೂ ಸಚ್ಛಿದ್ರಪುಂಡ್ರ

ಊರ್ಧ್ವಪುಂಡ್ರವನ್ನು ಮಹಿಳೆಯರು ಕೂಡಾ ಸಚ್ಛಿದ್ರವಾಗಿಯೇ ಧರಿಸಬೇಕೆಂಬ ವಿಷಯವನ್ನು ವಸಿಷ್ಠಸ್ಮೃತಿ ಹೀಗೆ ತಿಳಿಸುತ್ತದೆ-

ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ಸುಶೋಭನಮ್ ।
ವಿಪ್ರಾಣಾಂ ಸತತಂ ಧಾರ್ಯಂ ಸ್ತ್ರೀಣಾಂ ಚ ಶುಭದರ್ಶನಮ್ ॥
ಸಾಂತರಾಲೋರ್ಧ್ವಪುಂಡ್ರಸ್ಯ ಮಧ್ಯೇ ಕೃಷ್ಣಸ್ಯ ಧಾಮನಿ ।
ಹರಿದ್ರಾಸಾರಸಂಭೂತಾಂ ಸ್ತ್ರೀ ಚ ಚೂರ್ಣಂ ಪ್ರಧಾರಯೇತ್ ॥
ತೇನೋರ್ಧ್ವರೇಖಾಂ ರಚಯೇತ್ತಾಂ ಶ್ರಿಯಂ ಪರಿಚಿಂತಯೇತ್ ॥

ವ.ಸ್ಮೃ

ಗೋಪೀಚಂದನದಿಂದ ಸಚ್ಛಿದ್ರವಾಗಿ ಊರ್ಧ್ವಪುಂಡ್ರವನ್ನು ಧರಿಸಬೇಕು. ಅದರ ಮಧ್ಯದ ಭಾಗ ಶ್ರೀಕೃಷ್ಣನ ಮನೆ ಎಂದು ಭಾವಿಸಬೇಕು. ಅಲ್ಲಿ

ಕುಂಕುಮದಿಂದಲೂ ಊರ್ಧ್ವಪುಂಡ್ರವನ್ನೇ ಧರಿಸಬೇಕು. (ಕುಂಕುಮದಿಂದ ಧರಿಸಿದ ಪುಂಡ್ರವನ್ನು ಛಿದ್ರಗೊಳಿಸಬಾರದು.) ಆ ಕುಂಕುಮವೇ ಲಕ್ಷ್ಮೀದೇವಿ ಎಂದು ಚಿಂತಿಸಬೇಕು. ಹೀಗೆ ಶ್ರೀಕೃಷ್ಣನ ಮನೆಯಲ್ಲಿ ರಮಾದೇವಿ ನಿತ್ಯಾವಿಯೋಗಿನಿಯಾಗಿ ಇರುತ್ತಾಳೆಂದು ಅನುಸಂಧಾನಗೈಯಬೇಕು.

ಕುಂಕುಮವನ್ನು ಧರಿಸುವಾಗ ಈ ಕುಂಕುಮವನ್ನು ಧರಿಸುವ ಸೌಭಾಗ್ಯ ಕೊನೆಯ ವರೆಗೆ ನನಗಿರಲಿ ಎಂದು ಚಿಂತಿಸಬೇಕು. ಅಂತೆಯೇ ಈ ಶ್ಲೋಕವನ್ನು ಪಠಿಸಬೇಕು.

ರಮಾಮಪರ್ಣಾಂ ಗಾಯತ್ರೀಂ ಸಾವಿತ್ರೀಮಪ್ಯರುಂಧತೀಮ್ ।
ಸೌಭಾಗ್ಯಾಯ ನಮಸ್ಕೃತ್ಯ ಕುಂಕುಮಂ ಧಾರಯಾಮ್ಯಹಮ್ ॥

ಲಕ್ಷ್ಮೀದೇವಿ, ಸರಸ್ವತೀದೇವಿ, ಉಮಾದೇವಿ, ಸಾವಿತ್ರೀದೇವಿ, ಅರುಂಧತೀ-ದೇವಿ ಇವರೆಲ್ಲ ಸೌಭಾಗ್ಯವನ್ನು ಪಡೆದವರು. ಇವರ ಸೌಭಾಗ್ಯ ನಿತ್ಯವಾದುದು. ಸೌಭಾಗ್ಯವನ್ನು ನೀಡುವ ಸಾಮರ್ಥ್ಯವೂ ಇವರಿಗೆ ಇದೆ. ಇವರನ್ನು ನಾನು ಸ್ಮರಿಸಿ ಕುಂಕುಮವನ್ನು ಧರಿಸುತ್ತೇನೆ. ಎಂದು ಸ್ಮರಿಸುತ್ತಾ ಕುಂಕುಮವನ್ನು ಧರಿಸಬೇಕು.

ಗೋಪೀಚಂದನವನ್ನು ಧರಿಸಿದ ಮೇಲೆ, ಕುಂಕುಮವನ್ನು ಧರಿಸುವದಕ್ಕಿಂತಲೂ ಮೊದಲು ಅಲ್ಲಿ ಗದಾಮುದ್ರೆಯನ್ನು ಗೋಪೀಚಂದನದಿಂದ ಧರಿಸಬೇಕು. ಆ ವಿಷಯವನ್ನು ತಿಳಿಸುವ ಬ್ರಹ್ಮಕಾಂಡದ ವಚನವಿದು.

ಲಲಾಟದೇಶೇ ಚೋರ್ಧ್ವಪುಂಡ್ರಂ ಗದಾಂ ಚ
ಸಕುಂಕುಮಂ ಪ್ರವಿಹಾಯ್ಯೈವ ಯೋಯಮ್ ।
ನ ಶೋಭಂತೇ ಲಲನಾಃ ಸುಪಾಪಾ
ಅತೋ ಗಂಧಾನ್ ಧಾರಯಧ್ವಂ ಮುರಾರೇಃ ॥

ಗ.ಪು.ಬ್ರ.ಕಾಂ

ಹಣೆಯ ಮೇಲೆ ಊರ್ಧ್ವಪುಂಡ್ರವನ್ನು ಅಲ್ಲಿ ಗದಾಮುದ್ರೆಯನ್ನು ಅದರ ಮೇಲೆ ಕುಂಕುಮವನ್ನು ಸ್ತ್ರೀಯರು ಧರಿಸಬೇಕು. ಇವುಗಳನ್ನು ಧರಿಸದ ಮುಖ ಸೊಗಸುವದಿಲ್ಲ. ಅಲ್ಲದೆ ಅಂಥವಳು ಪಾಪಭಾಗಿನಿಯಾಗುತ್ತಾಳೆ. ಈ ವಿಷಯವನ್ನು ತಿಳಿಸುವ ಪ್ರಾಣೇಶದಾಸರ ಸುಳಾದಿಯೊಂದು ಹೀಗಿದೆ -

ಸ್ತ್ರೀ ಪುರುಷರೆಲ್ಲ ಧರಿಸುವದು ವಿವರವ
ತಿಳಿದು ಪಾಪಿ ಹೆಂಗಸು ಅವಳಾದರನ್ನಾ ।
ಗೋಪಿಚಂದನ ಗದಾ ಫಣೆಗೆ ಧರಿಸದಲಿದ್ದ-
ರಾಪುರುಷನಳಿದು ದುಃಖವ ಪಡುವಳು ॥

ಪುರುಷರಾಗಲಿ, ಸ್ತ್ರೀಯರಾಗಲಿ ಮನಬಂದಂತೆ ಪುಂಡ್ರಗಳನ್ನು ಮುದ್ರೆಗಳನ್ನು ಧರಿಸಕೂಡದು. ಅವರವರಿಗೆ ವಿಹಿತವಾದಂತೆಯೇ ಧರಿಸಬೇಕು.

ವಿಧವೆಯರು ಕೂಡಾ ಹಣೆಯ ಮೇಲೆ ಗೋಪೀಚಂದನವನ್ನು ಧರಿಸಿ ಆದರ ಮೇಲೆ ಅಂಗಾರವನ್ನು ಧರಿಸಬೇಕು.

ಸುವಾಸಿನಿಯರಾದ ಮಹಿಳೆಯರು ಹಣೆಯ ಮೇಲೆ ಒಂದು ಪುಂಡ್ರ, ಆದರ ಮೇಲೆ ಗದಾಮುದ್ರೆ ಆದರ ಮೇಲೆ ನಾರಾಯಣಮುದ್ರೆ ಧರಿಸಬೇಕು. ಹೀಗೆ ಧರಿಸುವದರಿಂದ ಅವಳ ಧರ್ಮಗಳು ಸಫಲವಾಗುತ್ತವೆ.

ಏಕಾದಶಿಯಂದು ಗೋಪೀಚಂದನವನ್ನು ಧರಿಸಿ ಆದರ ಮೇಲೆ ಅಂಗಾರವನ್ನು ಮಾತ್ರ ಧರಿಸಬೇಕು. ಅವತ್ತು ಗಂಧವನ್ನಾಗಲೀ ಅಕ್ಷತೆಯನ್ನಾಗಲೀ ಧರಿಸಬಾರದು.

ಕೃಷ್ಣಾಷ್ಟಮೀ, ವಿಷ್ಣುಪಂಚಕ, ಭೀಷ್ಮಪಂಚಕ ಮೊದಲಾದ ವ್ರತಗಳನ್ನು ಆಚರಿಸುವಾಗ ಗಂಧವನ್ನು, ಅಂಗಾರವನ್ನು, ಅಕ್ಷತೆಯನ್ನು ಅವಶ್ಯವಾಗಿ ಧರಿಸಬೇಕು.

ಇದು ನಾಮಧಾರಣೆ ಮತ್ತು ಮುದ್ರಾಧಾರಣೆಯ ವಿಚಾರ. ವಿಷ್ಣುವಿನ ದಾಸರು ನಾವು ಎಂಬುದನ್ನು ಜಗತ್ತಿಗೆಲ್ಲ ಸಾರಿ ಹೇಳುವ ಉದ್ದೇಶ ಇದಕ್ಕೆ ಮೂಲವಾಗಿದೆ. ಸಾಧಕರು ವೀರವೈಷ್ಣವರಾಗಲು ಈ ನಾಮ-ಮುದ್ರಾಧಾರಣೆ ಸಹಕಾರಿಯಾಗುತ್ತದೆ. ಸ್ಮೃತಿಗಳಲ್ಲಿ ಉಕ್ತವಾದ ನಿಯಮಗಳನ್ನು, ಸತ್ಸಂಪ್ರದಾಯವನ್ನು ಪಾಲನೆಮಾಡುತ್ತಾ ಈ ಚಿಹ್ನೆಗಳನ್ನು ಧರಿಸಬೇಕು. ಈ ವಿಷಯದಲ್ಲಿ ಸರ್ವಥಾ ಹೇತುವಾದಿಗಳಾಗಬಾರದು. ಸಂಕೋಚಪಟ್ಟು-ಕೊಳ್ಳಬಾರದು. ಹೀಗೆ ಮಾಡುವುದರಿಂದ ಲೌಕಿಕ-ಧಾರ್ಮಿಕ ಕೆಲಸಗಳೆಲ್ಲ ಸಂಪನ್ನವಾಗುತ್ತವೆ.

## ನಾಮಮುದ್ರಾಧಾರಣೆ ಸಂಕಲ್ಪ

**ಸಂಕಲ್ಪಃ**

ಆಚಮ್ಯ ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ, ಏವಂಗುಣ-ವಿಶೇಷಣವಿಶಿಷ್ಟಾಯಾಂ ಶುಭತಿಥೌ ಭಾರತೀರಮಣಮುಖ್ಯಪ್ರಾಣಾಂತ-ರ್ಗತಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಕರಿಷ್ಯಮಾಣ ಕರ್ಮಣಾಂ ಸಾಂಗತಾಸಿದ್ಧ್ಯರ್ಥಂ ಗೋಪೀಚಂದನಾಭಿಮಾನಿ ಮನ್ಮಥಾಂತರ್ಯಾಮಿ ಶ್ರೀವರಾಹಾತ್ಮಕ (ಶುಕ್ಲಪಕ್ಷೇ-ಕೇಶವಾದಿ ದ್ವಾದಶಮೂರ್ತ್ಯಾತ್ಮಕ, ಕೃಷ್ಣಪಕ್ಷೇ-ಸಂಕರ್ಷಣಾದಿದ್ವಾದಶಮೂರ್ತ್ಯಾತ್ಮಕ) ತಿಲಕಧಾರಣಂ, ಶ್ರೀಮುದ್ರಾಭಿಮಾನಿಶ್ರೀದುರ್ಗಾಂತರ್ಯಾಮಿಕೃದ್ಧೋಲ್ಕಾದಿಪಂಚ-ಮೂರ್ತ್ಯಾತ್ಮಕಶ್ರೀಚಕ್ರಾದಿಪಂಚಮುದ್ರಾಧಾರಣಂ ಚ ಕರಿಷ್ಯೇ ॥ ಹೀಗೆ ಸಂಕಲ್ಪಮಾಡಬೇಕು.

**ಶ್ರೀಹರಿಧ್ಯಾನಮ್**

ಶಂಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ ।
ಗೋವಿಂದ ಪುಂಡರೀಕಾಕ್ಷ ರಕ್ಷ ಮಾಂ ಶರಣಾಗತಮ್ ॥

ಈ ಶ್ಲೋಕದಿಂದ ಶ್ರೀಹರಿಯ ಧ್ಯಾನವನ್ನು ಮಾಡಬೇಕು

ನಂತರ ಗೋಪೀಚಂದನವನ್ನು ನಮಸ್ಕರಿಸಿ ಕೈಯಲ್ಲಿ ತೆಗೆದುಕೊಳ್ಳಬೇಕು.

**ಗೋಪೀಚಂದನಪ್ರಾರ್ಥನಾ**

ಮೃತ್ತಿಕೇ ಧಾರಯಿಷ್ಯಾಮಿ ಭಕ್ತ್ಯಾ ತ್ವಾಂ ಕೇಶವಪ್ರಿಯೇ ।
ತ್ವಯಾ ಸ್ಪೃಷ್ಟೋ ಗಮಿಷ್ಯಾಮಿ ವಿಷ್ಣುಲೋಕಂ ಸನಾತನಮ್ ॥
ಗೋಪೀಚಂದನ ಪಾಪಘ್ನ ವಿಷ್ಣುದೇಹಸಮುದ್ಭವ ।
ಚಕ್ರಾಂಕಿತ ನಮಸ್ತುಭ್ಯಂ ಧಾರಣಾನ್ಮುಕ್ತಿದೋ ಭವ ॥
ಧಾರಣಾದೂರ್ಧ್ವಪುಂಡ್ರಸ್ಯ ಶರೀರಂ ಮಂದಿರಂ ಹರೇಃ ।
ಮೃತ್ತಿಕೇ ಧಾರಯಿಷ್ಯಾಮಿ ಭಕ್ತ್ಯಾ ತ್ವಾಂ ಕೇಶವಪ್ರಿಯೇ ।
ತ್ವಯಾ ಸ್ಪೃಷ್ಟೋ ಗಮಿಷ್ಯಾಮಿ ವಿಷ್ಣೋರ್ಲೋಕಂ ಸನಾತನಮ್ ॥

ಈ ಶ್ಲೋಕಗಳಿಂದ ಗೋಪೀಚಂದನವನ್ನು ಪ್ರಾರ್ಥಿಸಿ ನಮಸ್ಕರಿಸಬೇಕು.

**ನಿರ್ಮಾಲ್ಯಜಲಗ್ರಹಣಮ್**

ಇಮಂ ಮೇ ಗಂಗೇ ಯಮುನೇ ಸರಸ್ವತಿ
ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾಽಽ
ರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ಎಂಬ ಮಂತ್ರವನ್ನು ಪಠಿಸುತ್ತಾ ಶಾಲಗ್ರಾಮದ ನಿರ್ಮಾಲ್ಯಜಲವನ್ನು ಎಡಗೈಯಲ್ಲಿ ಹಾಕಿಕೊಳ್ಳಬೇಕು.

**ಜಲಾಭಿಮಂತ್ರಣಮ್**

ಓಂ ಭೂರ್ಭುವಃ ಸ್ವಃ । ತತ್ ಸ ವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥

ಓಂ ನಮೋ ನಾರಾಯಣಾಯ ನಮಃ ಓಂ ॥

ಎಂದು ಗಾಯತ್ರೀಮಂತ್ರದಿಂದ ಅಥವಾ ಅಷ್ಟಾಕ್ಷರಮಂತ್ರದಿಂದ ಕೈಯಲ್ಲಿ ಹಾಕಿಕೊಂಡ ಜಲವನ್ನು ಅಭಿಮಂತ್ರಿಸಬೇಕು.

ಈ ರೀತಿಯಾಗಿ ಮಂತ್ರಪೂತವಾದ ಜಲದಲ್ಲಿ ಗೋಪೀಚಂದನವನ್ನು ಇರಿಸಬೇಕು.

**ಗೋಪೀಚಂದನಮರ್ದನ**

ಸ್ಯೋನಾ ಪೃಥಿವೀ ಭವಾನೃಕ್ಷರಾ ನಿವೇಶನೀ ।
ಯಚ್ಛಾ ನಃ ಶರ್ಮ ಸಪ್ರಥಾಃ ॥

ಎಂಬ ಮಂತ್ರವನ್ನು, ಗಾಯತ್ರೀಮಂತ್ರವನ್ನು ಮತ್ತು ನಾರಾಯಣಮಂತ್ರವನ್ನು ಪಠಿಸುತ್ತಾ ಗೋಪೀಚಂದನವನ್ನು ಮರ್ದನ ಮಾಡಬೇಕು.

ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ
ಯಃ ಪಾರ್ಥಿವಾನಿ ವಿಮಮೇ ರಜಾಂಸಿ ।
ಯೋ ಅಸ್ಕಭಾಯದುತ್ತರಂ ಸದಸ್ಥಂ
ವಿಚಕ್ರಮಾಣಸ್ತ್ರೇಧೋರುಗಾಯಃ ॥

ಮರ್ದನೆ ಮಾಡುವಾಗ ಈ ಮಂತ್ರವನ್ನು ಕೂಡಾ ಪಠಿಸಬೇಕು.

**ಗೋಪೀಚಂದನಾಭಿಮಂತ್ರಣ**

ಮರ್ದನೆ ಮಾಡಿದ ಗೋಪೀಚಂದನವನ್ನು ಗಾಯತ್ರೀಮಂತ್ರದಿಂದ ನಾರಾಯಣಮಂತ್ರದಿಂದ ಹತ್ತುಬಾರಿ ಅಥವಾ ಮೂರುಬಾರಿ ಅಭಿಮಂತ್ರಿಸಬೇಕು. ಹಿಂದೆ ತಿಳಿಸಿದ ''ಸ್ಯೋನಾ ಪೃಥಿವಿಭವಾ'' ಎಂಬ ಮಂತ್ರವನ್ನು ಪಠಿಸಬೇಕು.

ಈ ಸಂದರ್ಭದಲ್ಲಿ ಕೆಳಗಿನ ಮಂತ್ರಗಳನ್ನು ಕೂಡಾ ಪಠಿಸಬೇಕು.

ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ ।
ಪೃಥಿವ್ಯಾಃ ಸಪ್ತ ಧಾಮಭಿಃ ॥

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥

ಈ ಮಂತ್ರಗಳನ್ನು ಪಠಿಸಿದ ನಂತರ ಭಕ್ತಿಯಿಂದ ತಿಲಕಗಳನ್ನು ಧರಿಸಬೇಕು.

ಶುಕ್ಲಪಕ್ಷದಲ್ಲಿ ಕೇಶವಾದಿ ದಾಮೋದರಾಂತವಾದ ನಾಮಗಳಿಂದ ಕೃಷ್ಣಪಕ್ಷದಲ್ಲಿ ಹೃಷೀಕೇಶಾದಿ ಶ್ರೀಕೃಷ್ಣಾಂತವಾದ ನಾಮಗಳಿಂದ ಹಿಂದೆ ತಿಳಿಸಿದ ಕ್ರಮದಲ್ಲಿಯೇ ದ್ವಾದಶಪುಂಡ್ರಗಳನ್ನು ಬ್ರಾಹ್ಮಣರು ಧರಿಸಬೇಕು.

## ಮುದ್ರಾಧಾರಣಮಂತ್ರಾಃ

ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ ।
ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ ॥

ಪಾಂಚಜನ್ಯ ನಿಜಧ್ವಾನಧ್ವಸ್ತಪಾತಕಸಂಚಯ ।
ಪಾಹಿ ಮಾಂ ಪಾಪಿನಂ ಘೋರಂ ಸಂಸಾರಾರ್ಣವಪಾತಿನಮ್ ॥

ಸಂಸಾರಭಯಭೀತಾನಾಂ ಯೋಗಿನಾಮಭಯಪ್ರದಮ್ ।
ಪದ್ಮಹಸ್ತೇನ ಯೋ ದೇವೋ ಯೋಗೀಶಂ ತಂ ನಮಾಮ್ಯಹಮ್ ॥

ಬ್ರಹ್ಮಾಂಡಭುವನಾರಂಭೇ ಮೂಲಸ್ತಂಭೋ ಗದಾಧರಃ ।
ಕೌಮೋದಕೀ ಕರೇ ಯಸ್ಯ ತಂ ನಮಾಮಿ ಗದಾಧರಮ್ ॥

ನಾರಾಯಣ ನಮಸ್ತೇಽಸ್ತು ನಾಮಮುದ್ರಾಂಕಿತಂ ನರಮ್ ।
ದೃಷ್ಟ್ವೈವ ಲಭತೇ ಮುಕ್ತಿಂ ಚಾಂಡಾಲೋ ಬ್ರಹ್ಮಘಾತಕಃ ॥

ಈ ಮಂತ್ರಗಳನ್ನು ಪಠಿಸುತ್ತಾ ಚಕ್ರಾದಿಮುದ್ರೆಗಳನ್ನು ಹಿಂದೆ ತಿಳಿಸಿದ ಕ್ರಮದಲ್ಲಿಯೇ ಧರಿಸಬೇಕು.

॥ ಶ್ರೀ ಕೃಷ್ಣಾರ್ಪಣಮಸ್ತು ॥

